CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೩೮ | ಬೆಂಗಳೂರು, ಗುರುವಾರ, ಅಕ್ಟೋಬರ್ ೩೦, ೨೦೦೩ (ಕಾರ್ತಿಕ ೮, ಶಕ ವರ್ಷ ೧೯೨೫) | ಸಂಚಿಕೆ ೪೩ |
| --- | --- | --- |

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಸಣ್ಣ ಕೈಗಾರಿಕೆ ಹಾಗೂ ಹಜ್ ಸಚಿವರ ಆಪ್ತ ಶಾಖೆಯಲ್ಲಿರುವ ಒಂದು ವಿಶೇಷ ಕರ್ತವ್ಯಾಧಿಕಾರಿ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 196 ಸಆಸೇ 2002, ದಿನಾಂಕ: 27.09.2002.
2) ಅಧಿಸೂಚನೆ ಸಂಖ್ಯೆ: ಸಿಆಸುಇ 196 ಸಆಸೇ 2002, ದಿನಾಂಕ: 27.09.2002.
3) ಮಹಾಲೇಖಪಾಲರು ಲೆಕ್ಕಪತ್ರ ಇವರ ಪತ್ರ ಸಂಖ್ಯೆ: ಜೀಇ 12 ಎ-1:2003-04: 444-45, ದಿನಾಂಕ: 14.07.2003.
4) ಮಾನ್ಯ ಸಣ್ಣ ಕೈಗಾರಿಕೆ ಹಜ್ ಸಚಿವರ ಟಿಪ್ಪಣಿ ಸಂಖ್ಯೆ: ಸಕೈಹಸ 390:2003, ದಿನಾಂಕ: 30.07.2003.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾಗಿರುವ ದಿನಾಂಕ:27.09.2002ರ ಸರ್ಕಾರಿ ಆದೇಶದಲ್ಲಿ ಮಾನ್ಯ ಸಣ್ಣ ಕೈಗಾರಿಕೆ ಹಾಗೂ ಹಜ್ ಸಚಿವರ ಆಪ್ತ ಶಾಖೆಯಲ್ಲಿರುವ ಒಂದು ಗ್ರೂಪ್ 'ಸಿ' ಹುದ್ದೆಯನ್ನು ದಿನಾಂಕ: 01.07.2002ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ಶ್ರೀ ಮೊಹಮ್ಮದ್ ಅಹಂ ಇವರು ಈ ಹುದ್ದೆಯಲ್ಲಿ ಮುಂದುವರೆಯುವ ಅವಧಿಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೆ ರೂ. 8000-13440ರ ವೇತನ ಶ್ರೇಣಿಯ ಗ್ರೂಪ್ 'ಎ' ಹುದ್ದೆಯಾದ ವಿಶೇಷ ಕರ್ತವ್ಯಾಧಿಕಾರಿ ಹುದ್ದೆಗೆ ಉನ್ನತೀಕರಿಸಲಾಗಿರುತ್ತದೆ. ಹಾಗೂ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 27.09.2002ರ ಅಧಿಸೂಚನೆಯಲ್ಲಿ ಶ್ರೀ ಮೊಹಮ್ಮದ್ ಅಜಂ, ಅರ್ಥಶಾಸ್ತ್ರ ಉಪನ್ಯಾಸಕರು, ಕಾಲೇಜು ಶಿಕ್ಷಣ ನಿರ್ದೇಶನಾಲಯ ಇವರನ್ನು ಈ ಹುದ್ದೆಯಲ್ಲೆ ನೇಮಿಸಲಾಗಿರುತ್ತದೆ.

ಪ್ರಸ್ತುತ ಇವರ ಒಂದು ವರ್ಷದ ನಿಯೋಜನಾವಧಿಯು ದಿನಾಂಕ: 30.06.2003ಕ್ಕೆ ಈಗಾಗಲೇ ಮುಕ್ತಾಯಗೊಂಡಿರುತ್ತದೆ. ಮಹಾಲೇಖಪಾಲರು ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ: 14.07.2003ರ ಪತ್ರದಲ್ಲಿ ಸದರಿ ವಿಶೇಷಾಧಿಕಾರಿ ಹುದ್ದೆಯನ್ನು ಮುಂದುವರೆಸಿರುವ ಬಗ್ಗೆ ಹೊರಡಿಸಿರುವ ಆದೇಶದ ಪ್ರತಿಯನ್ನು ಕಳುಹಿಸಿಕೊಡುವಂತೆ ಕೋರಿರುತ್ತಾರೆ. ಮಾನ್ಯ ಸಣ್ಣ ಕೈಗಾರಿಕೆ ಹಾಗೂ ಹಜ್ ಸಚಿವರು ಕ್ರಮ ಸಂಖ್ಯೆ (4)ರಲ್ಲಿ ಓದಲಾದ ದಿನಾಂಕ: 30.07.2003ರ ಟಿಪ್ಪಣಿಯಲ್ಲಿ ಶ್ರೀ ಮೊಹಮ್ಮದ್ ಅಜಂ ಇವರ ನಿಯೋಜನಾ ಸೇವೆಯನ್ನು ಮುಂದುವರೆಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 68, ಸಸಿವಿ 2003, ಬೆಂಗಳೂರು, ದಿನಾಂಕ:30ನೇ ಸೆಪ್ಟೆಂಬರ್, 2003**

ಮಾನ್ಯ ಸಣ್ಣ ಕೈಗಾರಿಕೆ ಹಾಗೂ ಹಜ್ ಸಚಿವರ ಆಪ್ತ ಶಾಖೆಯಲ್ಲಿರುವ ಒಂದು ವಿಶೇಷ ಕರ್ತವ್ಯಾಧಿಕಾರಿ ಹುದ್ದೆಯನ್ನು ದಿನಾಂಕ:01.07.2003ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಅಥವಾ ಶ್ರೀ ಮೊಹಮ್ಮದ್ ಅಜಂ ರವರು ಈ ಹುದ್ದೆಯಲ್ಲಿ ಮುಂದುವರೆಯುವ ಅವಧಿಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1561 ವೆಚ್ಚ-5:2003, ದಿನಾಂಕ:10.09.2003ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1280 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಶ್ರೀ ಶಿವರಾಮ ಬಿಲ್ಲವ, ಪದವೀಧರ ಇಂಜಿನಿಯರ್ (ಎಂ.ಆರ್.ಇ) ಇವರು ದಿನಾಂಕ: 04.02.2001ಕ್ಕೆ ದಿನಗೂಲಿ ನೌಕರರಾಗಿ ಹತ್ತು ವರ್ಷಗಳ ಸೇವೆ ಸಲ್ಲಿಸಿರುವುದರಿಂದ ಸಕ್ರಮಗೊಳಿಸುವ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 36 ಪಿಡಬ್ಲ್ಯೂಸಿ 2003, ಬೆಂಗಳೂರು, ದಿನಾಂಕ: 27ನೇ ಸೆಪ್ಟೆಂಬರ್, 2003**

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ:29.09.94.
2) ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯೂಡಿ 357 ಪಿಡಬ್ಲ್ಯೂಸಿ 90 ದಿನಾಂಕ: 02.12.94.
3) ಸರ್ಕಾರದ ಪತ್ರ ಸಂಖ್ಯೆ: ಪಿಡಬ್ಲ್ಯೂಡಿ 201 ಪಿಡಬ್ಲ್ಯೂಸಿ 95, ದಿನಾಂಕ: 02.07.94, 01.09.95 ಮತ್ತು 13.09.95.
4) ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯೂಡಿ 42 ಪಿಡಬ್ಲ್ಯೂಸಿ 97, ದಿನಾಂಕ: 21.05.97.
5) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದ) ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಬಿಎಸ್:274-ಇಎಸ್‌ಎಂ-ದಿನೌಸೇ:2002-03 ದಿನಾಂಕ: 08.07.2003.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶದಲ್ಲಿ ಸರ್ವೋಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 737:90, 738:90, 1038:90 ಮತ್ತು 297:91ರಲ್ಲಿ ನೀಡಿರುವ ಆದೇಶದನ್ವಯ ದಿನಾಂಕ: 01.07.84ರ ನಂತರ ಹಾಗೂ 15.10.92ಕ್ಕೆ ಮೊದಲು ದಿನಗೂಲಿಯಲ್ಲಿ ನೇಮಕ ಹೊಂದಿದ ಪದವೀಧರ ಮತ್ತು ಡಿಪ್ಲೋಮಾ ಇಂಜಿನಿಯರ್‌ರನ್ನು ಹಲವು ಷರತ್ತುಗಳಿಗೆ ಒಳಪಟ್ಟಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಲು ಆದೇಶಿಸಿದೆ.

ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಸಿ.ಆ.ಸು.ಇಲಾಖೆಯ ಆದೇಶಾನುಸಾರ ಕ್ರಮ ಸಂಖ್ಯೆ: (2)ರ ಆದೇಶದಲ್ಲಿ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳಲ್ಲಿ ದಿನಾಂಕ: 01.07.84ರ ನಂತರ 15.10.92ಕ್ಕೆ ಮುಂಚೆ ನೇಮಕ ಹೊಂದಿದ ಪದವೀಧರ ಹಾಗೂ ಡಿಪ್ಲೋಮಾ ಇಂಜಿನಿಯರ್‌ರನ್ನು ದಿನಾಂಕ: 29.09.94ರಿಂದ ಜಾರಿಗೆ ಬರುವಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಿ ಆದೇಶವನ್ನು ಹೊರಡಿಸಲಾಗಿದೆ. ದಿನಾಂಕ: 29.09.94ರ ಆದೇಶದಲ್ಲಿ ಕಂಡಿಕೆ 6 ಮತ್ತು 7ರಲ್ಲಿ ದಿನಗೂಲಿ ಸೇವೆಯಲ್ಲಿ 10 ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸಲು ಸಹ ಆದೇಶಿಸಲಾಗಿದೆ. ಪದವೀಧರ ಇಂಜಿನಿಯರರಿಗೆ ಸಂಬಂಧಿಸಿದಂತೆ ಸರ್ಕಾರದ ವತಿಯಿಂದಲೂ ಹಾಗೂ ಡಿಪ್ಲೋಮಾ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಆಯಾ ಮುಖ್ಯ ಇಂಜಿನಿಯರ್‌ರವರು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ನಿರ್ದೇಶಿಸಲಾಗಿದೆ.

ಕ್ರಮ ಸಂಖ್ಯೆ: (3)ರಲ್ಲಿ ಓದಲಾದ ಪತ್ರಗಳಲ್ಲಿ ಹತ್ತು ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸುವ ಸಲುವಾಗಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳ ಎಲ್ಲಾ ಮುಖ್ಯ ಇಂಜಿನಿಯರ್‌ಗಳನ್ನು ಕೋರಲಾಗಿದೆ.

ಅದರಂತೆ ಕ್ರಮ ಸಂಖ್ಯೆ: (4)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ(ದ), ಬೆಂಗಳೂರು ಇವರಿಂದ ಸ್ವೀಕೃತವಾದ ಪ್ರಸ್ತಾವನೆಯನ್ನು ಪರಿಶೀಲಿಸಿ ಸಿ.ಆ.ಸು. ಇಲಾಖೆಯ ಸಂಖ್ಯೆ: ಡಿಪಿಎಆರ್:13:ಎಸ್‌ಎಲ್‌ಸಿ 94 ದಿನಾಂಕ: 29.09.94 ಹಾಗೂ ಪಿಡಬ್ಲ್ಯೂಡಿ 42 ಪಿಡಬ್ಲ್ಯೂಸಿ 97 ದಿನಾಂಕ: 21.05.97ರ ಆದೇಶದನ್ವಯ ಮಾಸಿಕ ವೇತನದಡಿಯಲ್ಲಿ ಕೆಲಸ ಮಾಡುತ್ತಿರುವ ಸಹಾಯಕ ಇಂಜಿನಿಯರ್‌ರನ್ನು ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

### ಆದೇಶ

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಲೋಕೋಪಯೋಗಿ ಇಲಾಖೆಗಳಲ್ಲಿ ದಿನಾಂಕ: 01.07.84ರ ನಂತರ ಹಾಗೂ 15.10.92ಕ್ಕೆ ಮುಂಚೆ ದಿನಗೂಲಿ ಆಧಾರದ ಮೇಲೆ ನೇಮಕಗೊಂಡು ಮಾಸಿಕ ವೇತನ ವ್ಯವಸ್ಥೆಯಡಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್‌ಎಲ್‌ಸಿ: 94 ದಿನಾಂಕ: 29.09.94 ಹಾಗೂ ಪಿಡಬ್ಲ್ಯೂಡಿ 42 ಪಿಡಬ್ಲ್ಯೂಸಿ 97, ದಿನಾಂಕ: 21.05.97ರ ಆದೇಶಗಳಲ್ಲಿ ವಿಧಿಸಿರುವ ಷರತ್ತುಗಳನ್ನು ಪೂರೈಸಿದ ಈ ಕೆಳಕಂಡ ಪದವೀಧರ ಇಂಜಿನಿಯರ್‌ರನ್ನು ಅವರ ಮುಂದೆ ಸೂಚಿಸಲಾಗಿರುವ ದಿನಾಂಕದಿಂದ ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಹೆಸರು | ದಿನಗೂಲಿಗೆ ಸೇರಿದ ದಿನಾಂಕ | 10 ವರ್ಷ ಸೇವೆ ಪೂರೈಸಿದ ದಿನಾಂಕ | ಕ್ರಮಬದ್ಧಗೊಂಡ ದಿನಾಂಕ | ಕಾರ್ಯ ನಿರ್ವಹಿಸುತ್ತಿರುವ ಸ್ಥಳ |
|---|---|---|---|---|---|
| 1. | ಶ್ರೀ ಶಿವರಾಮ ಚಂದಪ್ಪ ಬಿಲ್ಲವ, ಪದವೀಧರ ಇಂಜಿನಿಯರ್ | 01.02.1990 04.02.1991 | 03.02.2001 | 04.02.2001 | ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ದೇವದುರ್ಗ. |

ಸದರಿ ನೌಕರರಿಗೆ ಆದೇಶ ಹೊರಡಿಸಿದ ದಿನಾಂಕದಿಂದ ಆರ್ಥಿಕ ಸೌಲಭ್ಯ ಹಾಗೂ ಸೇವಾ ಹಿರಿತನವನ್ನು ನೀಡಲು ಪರಿಗಣಿಸತಕ್ಕದ್ದು.

ಸಕ್ರಮ ಸೇವೆಯಲ್ಲಿ ವಿಲೀನಗೊಂಡ ನಂತರ ಮೇಲ್ಕಂಡ ಸಹಾಯಕ ಇಂಜಿನಿಯರ್‌ರನ್ನು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದ) ಬೆಂಗಳೂರು ಇವರ ವಶಕ್ಕೆ ನೀಡಿ ಮುಂದಿನ ಸ್ಥಳ ನಿಯುಕ್ತಿ ಆದೇಶ ನೀಡಲು ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಿದೆ. ಇವರು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದ) ಬೆಂಗಳೂರು ಇವರಲ್ಲಿ ಕಾರ್ಯವರದಿ ಮಾಡುವುದು.

ಈ ಆದೇಶವನ್ನು ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ: 29.09.94ರ ಆದೇಶದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವೈ. ಸಾಗರ್**

ಪೀಠಾಧಿಕಾರಿ,

ಪಿ.ಆರ್. 1281 ಲೋಕೋಪಯೋಗಿ ಇಲಾಖೆ (ಸೇವೆಗಳು-ಸಿ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಮುಖ್ಯ ಕಾರ್ಯದರ್ಶಿಗಳ ಆಪ್ತ ಶಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ: ಸಿಬ್ಬಂದಿ ವರ್ಗದವರಿಗೆ ವಿಧಾನ ಮಂಡಲ ಅಧಿವೇಶನದ ಸಮಯದಲ್ಲಿ ನೀಡುತ್ತಿರುವ ಗೌರವಧನವನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 199 ಸಆಸೇ 2001, ದಿನಾಂಕ: 04.08.2001.

2) ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳ ಟಿಪ್ಪಣಿ ಸಂಖ್ಯೆ: ಮುಕಾ 1917/2003, ದಿನಾಂಕ:20.05.2003.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾಗಿರುವ ದಿನಾಂಕ:04.08.2001ರ ಸರ್ಕಾರಿ ಆದೇಶದಲ್ಲಿ ಮುಖ್ಯ ಕಾರ್ಯದರ್ಶಿಯವರ ಆಪ್ತ ಶಾಖೆಯಲ್ಲಿರುವ ಅಧಿಕಾರಿ:ಸಿಬ್ಬಂದಿ ವರ್ಗದವರಿಗೆ ವಿಧಾನ ಮಂಡಲದ ಅಧಿವೇಶನದಲ್ಲಿರುವಾಗ ಈ ಕೆಳಕಂಡಂತೆ ಗೌರವ ಧನವನ್ನು ಮಂಜೂರು ಮಾಡಲಾಗಿರುತ್ತದೆ:

ಅ. ಗ್ರೂಪ್ 'ಎ' ಮತ್ತು 'ಬಿ' ಅಧಿಕಾರಿಗಳಿಗೆ ರೂ. 60.00 (ಪ್ರತಿ ದಿನ)

ಆ. ಗ್ರೂಪ್ 'ಸಿ' ಮತ್ತು 'ಡಿ' ನೌಕರರಿಗೆ ರೂ. 50.00 (ಪ್ರತಿ ದಿನ)

ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಯವರು ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 20.05.2003ರ ಟಿಪ್ಪಣಿಯಲ್ಲಿ ವಿಧಾನ ಮಂಡಲ ಸಚಿವಾಲಯದ ಅಧಿಕಾರಿ: ನೌಕರರಿಗೆ ವಿಧಾನ ಮಂಡಲ ಅಧಿವೇಶನ ಸಮಯದಲ್ಲಿ ನೀಡಲಾಗುತ್ತಿರುವ ಗೌರವ ಧನವನ್ನು ಆದೇಶ ಸಂಖ್ಯೆ: ಕವಿಸಸ/ಅ-1/98/ಗೌಧ/02, ದಿನಾಂಕ:06.09.2002ರ ಅನ್ವಯ 'ಎ' ಮತ್ತು 'ಬಿ' ಗುಂಪಿನ ಅಧಿಕಾರಿಗಳಿಗೆ ದಿನ ಒಂದಕ್ಕೆ ರೂ. 90.00 ರಂತೆ ಮತ್ತು 'ಸಿ' ಮತ್ತು 'ಡಿ' ಗುಂಪಿನ ನೌಕರರಿಗೆ ದಿನ ಒಂದಕ್ಕೆ ರೂ. 75.00ರಂತೆ ಹೆಚ್ಚಿಸಲಾಗಿರುತ್ತದೆ. ಆದುದರಿಂದ ಮುಖ್ಯ ಕಾರ್ಯದರ್ಶಿಯವರ ಆಪ್ತಶಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿ:ನೌಕರರಿಗೆ ನೀಡಲಾಗುತ್ತಿರುವ ಗೌರವ ಧನವನ್ನು ಸಹ ಹೆಚ್ಚಿಸುವ ಬಗ್ಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 196, ಸಆಸೇ 2003, ಬೆಂಗಳೂರು, ದಿನಾಂಕ:30ನೇ ಸೆಪ್ಟೆಂಬರ್, 2003**

ಮುಖ್ಯ ಕಾರ್ಯದರ್ಶಿಯವರ ಆಪ್ತ ಶಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ: ಸಿಬ್ಬಂದಿ ವರ್ಗದವರಿಗೆ ವಿಧಾನ ಮಂಡಲದ ಅಧಿವೇಶನದ ಸಮಯದಲ್ಲಿ ನೀಡಲಾಗುತ್ತಿರುವ ಗೌರವ ಧನವನ್ನು ದಿನಾಂಕ: 27.02.2003ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ಹೆಚ್ಚಿಸಲು ಮಂಜೂರಾತಿ ನೀಡಲಾಗಿದೆ.

ಅ. ಗ್ರೂಪ್ 'ಬಿ' ವರ್ಗದ ಅಧಿಕಾರಿಗಳಿಗೆ ರೂ. 60.00 ರಿಂದ ರೂ. 90.00 (ಪ್ರತಿ ದಿನ)

ಆ. ಗ್ರೂಪ್ 'ಸಿ' ಮತ್ತು 'ಡಿ' ವರ್ಗದ ನೌಕರರಿಗೆ ರೂ. 50.00 ರಿಂದ ರೂ. 75.00 (ಪ್ರತಿ ದಿನ)

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1245/ ವೆಚ್ಚ-5/ 2003, ದಿನಾಂಕ: 20.09.2003ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1282 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಫಾಸ್ಟ್ ಟ್ರ್ಯಾಕ್ ನ್ಯಾಯಾಲಯಗಳಿಗೆ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಹೊಂದಿದ 8 ನಿವೃತ್ತ ಜಿಲ್ಲಾ ನ್ಯಾಯಾಧೀಶರ ಗುತ್ತಿಗೆ ಅವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶದ ಸಂಖ್ಯೆ: ಲಾ 369 ಎಲ್‌ಎಎಂ 2000, ದಿನಾಂಕ: 29.05.2001.

2) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 48 ಎಸ್‌ಎಚ್‌ಸಿ 2001, ದಿನಾಂಕ: 06.08.2001.

3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 48 ಸೇಉನ್ಯಾ 2001, ದಿನಾಂಕ:21.08.2001.

4) ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ ಜಿಒಬಿ(1) 585:2000, ದಿನಾಂಕ: 01.08.2003.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಎರಡು ವರ್ಷಗಳಿಗಿಂತ ಹೆಚ್ಚಾಗಿ ಬಾಕಿ ಇರುವ ನ್ಯಾಯಾಲಯ ಪ್ರಕರಣಗಳನ್ನು ಶೀಘ್ರವಾಗಿ ಇತ್ಯರ್ಥಪಡಿಸಲು 11ನೇ ಆರ್ಥಿಕ ಆಯೋಗದ ಶಿಫಾರಸ್ಸಿನನ್ವಯ 13 ಫಾಸ್ಟ್ ಟ್ರ್ಯಾಕ್ ನ್ಯಾಯಾಲಯಗಳನ್ನು ರಾಜ್ಯದಲ್ಲಿ ವಿವಿಧ ಸ್ಥಳಗಳಲ್ಲಿ ಸ್ಥಾಪಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಹೊಸದಾಗಿ ಸ್ಥಾಪಿಸಲಾದ ಫಾಸ್ಟ್ ಟ್ರ್ಯಾಕ್ ಕೋರ್ಟ್‌ಗಳಿಗೆ 13 ನಿವೃತ್ತ ಜಿಲ್ಲಾ ನ್ಯಾಯಾಧೀಶರುಗಳನ್ನು ಕರ್ನಾಟಕ ನಾಗರೀಕ ಸೇವೆ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 15 ರನ್ವಯ ಗುತ್ತಿಗೆ ಆಧಾರದ ಮೇಲೆ ಮಾಸಿಕ ರೂ. 9,500 ಗಳ ಸಂಚಿತ ವೇತನದ ಮೇಲೆ ಪ್ರಥಮತ: 2 ವರ್ಷಗಳ ಅವಧಿಗೆ ಪ್ರಿಸೈಡಿಂಗ್ ಅಧಿಕಾರಿಗಳನ್ನಾಗಿ ನೇಮಿಸಲಾಗಿದೆ ಹಾಗೂ ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಈ ರೀತಿ ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡ ಪ್ರಿಸೈಡಿಂಗ್ ಅಧಿಕಾರಿಗಳ ನೇಮಕಾತಿ ಬಗ್ಗೆ ಷರತ್ತು ಹಾಗೂ ನಿಬಂಧನೆಗಳನ್ನು ನಿಗದಿಪಡಿಸಲಾಗಿದೆ.

ಮೇಲೆ (4)ರಲ್ಲಿ ಓದಲಾದ ದಿನಾಂಕ: 01.08.2003ರ ಪತ್ರದಲ್ಲಿ ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ ಇವರು ಫಾಸ್ಟ್ ಟ್ರ್ಯಾಕ್ ನ್ಯಾಯಾಲಯಗಳಿಗೆ ಪ್ರಿಸೈಡಿಂಗ್ ಅಧಿಕಾರಿಗಳಾಗಿ ನೇಮಿಸಲಾದ 13 ನಿವೃತ್ತ ನ್ಯಾಯಾಧೀಶರ ಪೈಕಿ 8 ಮಂದಿ ನಿವೃತ್ತ ನ್ಯಾಯಾಧೀಶರು ದಿನಾಂಕ: 11.08.2001ರಂದು ಕರ್ತವ್ಯಕ್ಕೆ ಹಾಜರಾಗಿದ್ದು ಅವರ ನೇಮಕಾತಿ ಅವಧಿಯು ದಿನಾಂಕ: 10.08.2003ಕ್ಕೆ ಮುಕ್ತಾಯವಾಗುವುದಾಗಿ ತಿಳಿಸಿ ಒಪ್ಪಂದದ ಆಧಾರದ ಮೇಲೆ ಫಾಸ್ಟ್ ಟ್ರ್ಯಾಕ್ ನ್ಯಾಯಾಲಯಗಳಲ್ಲಿ ಪ್ರಿಸೈಡಿಂಗ್ ಅಧಿಕಾರಿಗಳಾಗಿ ಕೆಲಸ ನಿರ್ವಹಿಸುತ್ತಿರುವ ನ್ಯಾಯಾಧೀಶರುಗಳ ತೃಪ್ತಿಕರ ಸೇವೆಯನ್ನು ಪರಿಗಣಿಸಿ ಹಾಗೂ ಅವರ ಸೇವೆಯನ್ನು ಮುಂದುವರೆಸುವ ಅಗತ್ಯವಿರುವ ಕಾರಣ ಈ ಹಿಂದೆ ಹೊರಡಿಸಿದ ನೇಮಕಾತಿ ಷರತ್ತುಗಳಿಗೆ ಒಳಪಟ್ಟು ದಿನಾಂಕ: 11.08.2003 ರಿಂದ 10.08.2004ರವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅವರ ಸೇವೆಯನ್ನು ಮುಂದುವರೆಸಲು ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 66 ಸೇಉನ್ಯಾ 2003, ಬೆಂಗಳೂರು, ದಿನಾಂಕ: 3ನೇ ಅಕ್ಟೋಬರ್, 2003**

ರಾಜ್ಯದಲ್ಲಿ ಫಾಸ್ಟ್ ಟ್ರ್ಯಾಕ್ ನ್ಯಾಯಾಲಯಗಳಲ್ಲಿ ಪ್ರಿಸೈಡಿಂಗ್ ಅಧಿಕಾರಿಗಳಾಗಿ ಕೆಲಸ ಮಾಡುತ್ತಿರುವ ಈ ಕೆಳಕಂಡ 8 ನ್ಯಾಯಾಧೀಶರುಗಳ ಸೇವೆಯನ್ನು ಸರ್ಕಾರದ ಆದೇಶ ಸಂಖ್ಯೆ: 48 ಸೇಉನ್ಯಾ 2001, ದಿನಾಂಕ: 21.08.2001ರಲ್ಲಿ ನಮೂದಿಸಿದ ನೇಮಕಾತಿ ಷರತ್ತುಗಳಿಗೆ ಒಳಪಟ್ಟು ದಿನಾಂಕ:11.08.2003 ರಿಂದ 10.08.2004ರವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಕರ್ನಾಟಕ ನಾಗರೀಕ ಸೇವೆ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ನಿಯಮ 15 ರಡಿ ರೂ.9,500ಗಳ ಸಂಚಿತ ವೇತನದಲ್ಲಿ ಮುಂದುವರೆಸಲಾಗಿದೆ.

| | | | |
|---|---|---|---|
| 1) | ಶ್ರೀ ಪಿ. ಗೋಪಾಲಕೃಷ್ಣ,<br>ಪ್ರಿಸೈಡಿಂಗ್ ಅಧಿಕಾರಿಗಳು,<br>ಫಾಸ್ಟ್‌ಟ್ರ್ಯಾಕ್ ನ್ಯಾಯಾಲಯ ನಂ.1,<br>ಬೆಂಗಳೂರು ನಗರ. | 2) | ಶ್ರೀ ಕೆ. ನಾಗಯ್ಯ ಶೆಟ್ಟಿ,<br>ಪ್ರಿಸೈಡಿಂಗ್ ಅಧಿಕಾರಿಗಳು,<br>ಫಾಸ್ಟ್‌ಟ್ರ್ಯಾಕ್ ನ್ಯಾಯಾಲಯ ನಂ.2,<br>ಬೆಂಗಳೂರು ನಗರ. |
| 3) | ಶ್ರೀ ಎನ್. ಪ್ರಹ್ಲಾದಾಚಾರ್ಯ,<br>ಪ್ರಿಸೈಡಿಂಗ್ ಅಧಿಕಾರಿಗಳು,<br>ಫಾಸ್ಟ್‌ಟ್ರ್ಯಾಕ್ ನ್ಯಾಯಾಲಯ,<br>ಬೆಂಗಳೂರು ಗ್ರಾಮಾಂತರ. | 4) | ಶ್ರೀ ಶಂಕರ್ ಮುರಗದ್,<br>ಪ್ರಿಸೈಡಿಂಗ್ ಅಧಿಕಾರಿಗಳು,<br>ಫಾಸ್ಟ್‌ಟ್ರ್ಯಾಕ್ ನ್ಯಾಯಾಲಯ,<br>ರಾಯಚೂರು. |
| 5) | ಶ್ರೀ ಕುಮಾರಗೌಡ,<br>ಪ್ರಿಸೈಡಿಂಗ್ ಅಧಿಕಾರಿಗಳು,<br>ಫಾಸ್ಟ್‌ಟ್ರ್ಯಾಕ್ ನ್ಯಾಯಾಲಯ,<br>ಬಳ್ಳಾರಿ. | 6) | ಶ್ರೀ ವಿ.ಎಸ್. ಅರಟ್ಟಿ,<br>ಪ್ರಿಸೈಡಿಂಗ್ ಅಧಿಕಾರಿಗಳು,<br>ಫಾಸ್ಟ್‌ಟ್ರ್ಯಾಕ್ ನ್ಯಾಯಾಲಯ,<br>ಧಾರವಾಡ. |
| 7) | ಶ್ರೀ ಎಸ್.ಪಿ. ಹನ್ನಿನ್‌ಹಾಲ್,<br>ಪ್ರಿಸೈಡಿಂಗ್ ಅಧಿಕಾರಿಗಳು,<br>ಫಾಸ್ಟ್‌ಟ್ರ್ಯಾಕ್ ನ್ಯಾಯಾಲಯ,<br>ಬೆಳಗಾಂ. | 8) | ಶ್ರೀ ರಾಮರಾವ್ ಕುಲಕರ್ಣಿ,<br>ಪ್ರಿಸೈಡಿಂಗ್ ಅಧಿಕಾರಿಗಳು,<br>ಫಾಸ್ಟ್‌ಟ್ರ್ಯಾಕ್ ನ್ಯಾಯಾಲಯ ನಂ.1,<br>ಕೋಲಾರ. |

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ: ಆಇ 1571 ವೆಚ್ಚ-5: 2000 ದಿನಾಂಕ: 11.09.2003ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1283

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

## FOREST, ECOLOGY AND ENVIRONMENT SECRETARIAT

**Sub:** Diversion of 0.80 ha of forest land in Block VFt. Sy. No. 21 of Dandeli Ambewadi in favour of the President Muhaddise Azam Mission, Dandeli for grave yard (Khabarastan) for Muslim Community, Dandeli.

**Read:** 1) Letter No. A5(2) GFI CR.224/95-96 dated: 17-7/8-2001 and 16.6.2003 of the Principal Chief Conservator of Forests, Bangalore.

2) State Government letter No. FEE 233 FGL 2001, dated: 10.10.2001 and 04.07.2003.

3) Letter No. F(C)A/11.2/224/KAR/MISC/1679 dated: 26.11.2001 and 04.08.2003 of Government of India, Ministry of Environment and Forests, Regional Office, (South Zone), Bangalore.

**Preamble:**

The Principal Chief Conservator of Forests, Bangalore vide his letter dated: 17-7/8-1-2001 read at (1) above has submitted a proposal t State Government to obtain approval of Government of India under Section 2 of Forest (Conservation) Act 1980, for diversion of 0.80 ha, of forest land in Block No. V Ft. Sy.No. 21 of Dandeli (Ambewadi) in favour of the President, Muhaddise Azam Mission, Dandeli for burial ground for Muslim Community of Dandeli subject to certain conditions.

Accordingly, the proposal was recommended to Government of India for approval under section (2) of Forest (Conservation) Act 1980 vide State Government letter dated:10.10.2001 read at (2) above.

Government of India, Ministry of Environment and Forest, Regional Office, (South Zone), Bangalore vide their letter dated: 26.11.2001 read at (3) above has conveyed its approval in principle (Stage-I) to the proposal subject to fulfillment of certain conditions. Accordingly, the Principal Chief Conservator of Forests, Bangalore vide his letter dated: 16.6.2003 read at (1) above has furnished the compliance report and the same has sent to Government of India vide State Government letter Dated: 04.07.2003 read at (2) above.

Finally, Government of India, Ministry of Environment and Forests, Regional Office, (South Zone), Bangalore vide their letter dated: 04.08.2003 read at (3) above has conveyed its approval (Stage-II) to the proposal under section (2) of Forest (Conservation) Act, 1980 for the diversion of 0.80 ha. of forest land in Block V, Compt.2, Ft.Sy. No.21 of Dandeli (Ambewadi), Haliyal Division, U.K. District for grave yard for Muslim Community in favour of the President, Muhaddise Azam Mission, Dandeli subject to certain conditions.

The proposal has been examined in detail and the following orders are issued.

**Government Order No. FEE 233 FGL 2001, Bangalore, Dated: 18th September, 2003**

In the circumstances explained in the preamble above, Government are pleased to accord approval under section (2) of Forest (Conservation) Act 1980 for diversion of 0.80 ha. of forest land in Block V, Compt. 2, Ft.Sy.No.21 of Dandeli (Ambewadi), Haliyal Division, U.K. District for grave yard for Muslim Community in favour of the President, Muhaddise Azam Mission, Dandeli, subject to the following conditions:

1. The legal status of forest land shall remain unchanged.
2. The compensatory afforestation shall be raised over 2.00 ha. of degraded forest land at the cost of user agency at the rate prevailing at the time of approval (Now it is Rs. 54,200.00 per ha).
3. The total forest land utilised for the project shall not exceed 0.80 ha., In case the land is not used for the stipulated purpose or when it no longer needed for the stipulated purpose, then the area should automatically revert back to the forest department.
4. This shall be treated as a perpetual lease.
5. The lessee has to pay the lease rent as fixed by the Government from time to time.
6. The tree growth if any available shall be protected.
7. Any other conditions to be stipulated by the Government of India/State Government/Principal Chief Conservator of Forests, Karnataka in the interest of conservation of forests.

By Order and in the name of the Governor of Karnataka,

**S.R. VATSALA**

Under Secretary to Government,

Forest, Ecology and Environment Department.

PR-1284

## ನಗರಾಭಿವೃದ್ಧಿ ಸಚಿವಾಲಯ

## ತಿದ್ದುಪಡಿ ಆದೇಶ

**ಸಂಖ್ಯೆ: ನಅಇ 118 ಬೆಮಪ್ರಾ 2002, ಬೆಂಗಳೂರು, ದಿನಾಂಕ:6ನೇ ಅಕ್ಟೋಬರ್, 2003**

**ವಿಷಯ:** ಹುಬ್ಬಳ್ಳಿ (ತಾ) ಗೋಕುಲ ಗ್ರಾಮದ ರಿ.ಸ. ನಂ.50:2ರ ಪೈಕಿ 6 ಎಕರೆ 37 ಗುಂಟೆ ಪ್ರದೇಶವನ್ನು ವಸತಿ ಹಾಗೂ ಬಯಲು ಜಾಗೆಯಿಂದ ವಾಣಿಜ್ಯ ಭೂ ಉಪಯೋಗಕ್ಕೆ ಬದಲಾವಣೆ ಮಾಡುವ ಕುರಿತು.

**ಸರ್ಕಾರಿ ಆದೇಶ ಸಂಖ್ಯೆ:ನಅಇ 118 ಬೆಮಪ್ರಾ 2002,** ದಿನಾಂಕ: 06.09.2002ರಲ್ಲಿ ಹುಬ್ಬಳ್ಳಿ ತಾಲ್ಲೂಕು ಗೋಕುಲ ಗ್ರಾಮದ ಸರ್ವೆ ನಂ. 50:2ರಲ್ಲಿನ 6 ಎಕರೆ 37 ಗುಂಟೆ ವಿಸ್ತೀರ್ಣವುಳ್ಳ ಜಮೀನನ್ನು ವಸತಿ ಮತ್ತು ಬಯಲು ಜಾಗಗಳಿಂದ ಕೈಗಾರಿಕಾ ಉದ್ದೇಶಕ್ಕೆ ಭೂ ಬದಲಾವಣೆ ಮಾಡಲಾಗಿದೆ. ಈ ವಿಷಯದಲ್ಲಿ ಇದೇ ಸಮ ಸಂಖ್ಯೆಯ 10.12.2002ರಲ್ಲಿ ಹೊರಡಿಸಿರುವ ತಿದ್ದುಪಡಿ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂತೆಗೆದುಕೊಳ್ಳಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ. ಶ್ರೀಧರಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 1285

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಜಂಟಿ ಇಲಾಖಾ ವಿಚಾರಣೆ-1) ಶ್ರೀ ಟಿ. ಮಲ್ಲೇಶಪ್ಪ, ನಿರ್ದೇಶಕರು 2) ಶ್ರೀ ಎಸ್.ಬಿ. ಹೊಂಡದಕೇರಿ 3) ಶ್ರೀ ಕೆ.ಜಿ. ವೆಂಕಟೇಶ್, ಮುಖ್ಯ ಗ್ರಂಥಾಧಿಕಾರಿಗಳು, ಸಾರ್ವಜನಿಕ ಗ್ರಂಥಾಲಯ ಇಲಾಖೆ ಅವರುಗಳ ವಿರುದ್ಧ-ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ನೋಟೀಸ್ ಸಂಖ್ಯೆ: ಸಿಆಸುಇ 71 ಎಸ್ಇಎನ್ 99, ದಿನಾಂಕ: 23.05.2003.
2) ಶ್ರೀ ಟಿ. ಮಲ್ಲೇಶಪ್ಪ, ನಿರ್ದೇಶಕರ ಉತ್ತರ ದಿನಾಂಕ: 28.07.2003.
3) ಶ್ರೀ ಎಸ್.ಬಿ. ಹೊಂಡದಕೇರಿ, ಮುಖ್ಯ ಗ್ರಂಥಾಧಿಕಾರಿ ಅವರ ಉತ್ತರ ದಿನಾಂಕ: 26.07.2003.
4) ಶ್ರೀ ಕೆ.ಜಿ. ವೆಂಕಟೇಶ್, ಮುಖ್ಯ ಗ್ರಂಥಾಧಿಕಾರಿ ಅವರ ಉತ್ತರ ದಿನಾಂಕ:25.07.2003.

**ಪ್ರಸ್ತಾವನೆ:**

ಕೇಂದ್ರ ಗ್ರಂಥಾಲಯ, ಜಯನಗರ, ಬೆಂಗಳೂರು ಇಲ್ಲಿ ಮುಖ್ಯ ಗ್ರಂಥಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಗ್ರಂಥಾಲಯ ತಪಾಸಣೆಯನ್ನು ಕಾಲಕಾಲಕ್ಕೆ ಕೈಗೊಳ್ಳದೇ ಗ್ರಂಥಾಲಯದ 5,20,622-ಪುಸ್ತಕಗಳು ನಾಪತ್ತೆಯಾಗಲು ಕಾರಣರಾಗಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿದ ಆರೋಪಕ್ಕಾಗಿ 1) ಶ್ರೀ ಟಿ. ಮಲ್ಲೇಶಪ್ಪ, ನಿರ್ದೇಶಕರು ಸಾರ್ವಜನಿಕ ಗ್ರಂಥಾಲಯ ಇಲಾಖೆ ಅವರಿಗೂ ಕೇಂದ್ರ ಗ್ರಂಥಾಲಯ, ಪಶ್ಚಿಮವಲಯ, ಬೆಂಗಳೂರು ಇಲ್ಲಿ ಮುಖ್ಯ ಗ್ರಂಥಪಾಲಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಗ್ರಂಥಗಳನ್ನು ಖರೀದಿಸುವಲ್ಲಿ ವಿಹಿತಾಚಾರಗಳನ್ನು ಪಾಲಿಸದ ಆರೋಪಕ್ಕಾಗಿ, 2) ಶ್ರೀ ಎಸ್.ಬಿ. ಹೊಂಡದಕೇರಿ ಹಾಗೂ 3) ಶ್ರೀ ಕೆ.ಜಿ. ವೆಂಕಟೇಶ್, ಮುಖ್ಯ ಗ್ರಂಥಾಧಿಕಾರಿಗಳು, ಸಾರ್ವಜನಿಕ ಗ್ರಂಥಾಲಯ ಇಲಾಖೆ ಅವರುಗಳಿಗೂ ಮೇಲೆ (1)ರಲ್ಲಿ ಓದಲಾದ ದಿನಾಂಕ: 27.05.2003ರ ನೋಟೀಸ್ ನೀಡುವ ಮೂಲಕ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಈ ನೋಟೀಸ್‌ಗೆ ಆರೋಪಿಗಳು ಮೇಲೆ (2)(3) ಮತ್ತು (4)ರಲ್ಲಿ ಓದಲಾದ ದಿನಾಂಕ: 28.07.2003, 26.07.2003 ಹಾಗೂ 25.07.2003ರ ಉತ್ತರಗಳನ್ನು ಸಲ್ಲಿಸಿ ಆರೋಪಗಳನ್ನು ನಿರಾಕರಿಸಿದ್ದಾರೆ. ಆದ್ದರಿಂದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ತೀರ್ಮಾನಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಕ್ರಮಾಂಕ: ಸಿಆಸುಇ 71 ಎಸ್ಇಎನ್ 99, ಬೆಂಗಳೂರು, 27ನೇ ಸೆಪ್ಟೆಂಬರ್, 2003**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 13ರೊಡನೆ ಓದಿಕೊಂಡಂತೆ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಟಿ. ಮಲ್ಲೇಶಪ್ಪ, ನಿರ್ದೇಶಕರು, ಶ್ರೀ ಎಸ್.ಬಿ. ಹೊಂಡದಕೇರಿ ಹಾಗೂ ಶ್ರೀ ಕೆ.ಜಿ. ವೆಂಕಟೇಶ್, ಮುಖ್ಯ ಗ್ರಂಥಾಧಿಕಾರಿಗಳು, ಸಾರ್ವಜನಿಕ ಗ್ರಂಥಾಲಯ ಇಲಾಖೆ ಅವರುಗಳ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ವಿಚಾರಣೆ ನಡೆಸುವ ಸಲುವಾಗಿ ಶ್ರೀ ವೈ.ಆರ್. ಸಾವಕಾರ್, ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ಕಾರ್ಯಕ್ಕಾಗಿ ಅವರು ಸರ್ಕಾರಿ ಆದೇಶ ಕ್ರಮಾಂಕ: ಸಿಆಸುಇ 3 ಸೇಇವಿ 96 ದಿನಾಂಕ: 24.04.1998 ಹಾಗೂ ಸಿಆಸುಇ 45 ಸೇಇವಿ 2001 ದಿನಾಂಕ: 04.03.2002ರಲ್ಲಿ ನಿಗದಿಪಡಿಸಿರುವಂತೆ ಗೌರವಧನ ಹಾಗೂ ಪ್ರಯಾಣಭತ್ಯೆ ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ರಿಚರ್ಡ್ ಲೋಬೋ, ಅಧೀನ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳ ಇಲಾಖೆ, ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ವಿಚಾರಣೆಗೆ ಸ್ಥಳಾವಕಾಶ ಇತ್ಯಾದಿಗಳನ್ನು ಒದಗಿಸಲು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಶಿಕ್ಷಣ ಇಲಾಖೆ ಅವರು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

ಪಿ.ಆರ್. 1286

**ವಿಷಯ:** ಶ್ರೀ ಬಿ.ಎನ್. ಸುರೇಶ್, ಕೆ.ಎ.ಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಅವರ ಅಮಾನತ್ತನ್ನು ರದ್ದುಪಡಿಸಿ ಮತ್ತೆ ಸೇವೆಗೆ ತೆಗೆದುಕೊಳ್ಳುವ ಬಗ್ಗೆ.

**ಆದೇಶ ಕ್ರಮಾಂಕ: ಸಿಆಸುಇ 11 ಎಸ್‌ಇಎನ್ 2003, ಬೆಂಗಳೂರು, ದಿನಾಂಕ:8ನೇ ಅಕ್ಟೋಬರ್, 2003**

ಶ್ರೀ ಬಿ.ಎನ್. ಸುರೇಶ್, ಕೆ.ಎ.ಎಸ್. (ಆಯ್ಕೆ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ ಕಾದಿಟ್ಟು ಸರ್ಕಾರಿ ಆದೇಶ ಕ್ರಮಾಂಕ: ಸಿಆಸುಇ 11 ಎಸ್‌ಇಎನ್ 2003 ದಿನಾಂಕ: 17.06.2003ರಲ್ಲಿ ಅವರನ್ನು ಸೇವೆಯಿಂದ ಅಮಾನತ್ತಿನಲ್ಲಿಟ್ಟಿರುವುದರಿಂದಲೂ,

ಶ್ರೀ ಬಿ.ಎನ್. ಸುರೇಶ್, ಕೆ.ಎ.ಎಸ್. (ಆಯ್ಕೆ ಶ್ರೇಣಿ) ಅಧಿಕಾರಿ ಅವರ ಅಮಾನತ್ತನ್ನು ರದ್ದುಪಡಿಸಿ ಸೇವೆಗೆ ತೆಗೆದುಕೊಳ್ಳಬೇಕೆಂದು ಸರ್ಕಾರವು ಭಾವಿಸಿರುವುದರಿಂದಲೂ,

ಆದ್ದರಿಂದ, ಸರ್ಕಾರವು ಶ್ರೀ ಬಿ.ಎನ್. ಸುರೇಶ್, ಕೆ.ಎ.ಎಸ್. (ಆಯ್ಕೆ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಅವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿ ಈ ಮೂಲಕ ಮತ್ತೆ ಸೇವೆಗೆ ತೆಗೆದುಕೊಳ್ಳುತ್ತದೆ.

ಶ್ರೀ ಬಿ.ಎನ್. ಸುರೇಶ್, ಕೆ.ಎ.ಎಸ್. (ಆಯ್ಕೆ ಶ್ರೇಣಿ) ಅಧಿಕಾರಿ ಅವರನ್ನು ಯೋಜನಾ ನಿರ್ದೇಶಕರು, ನಗರಾಭಿವೃದ್ಧಿ ಘಟಕ, ಜಿಲ್ಲಾಧಿಕಾರಿಗಳ ಕಛೇರಿ, ತುಮಕೂರು ಈ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಸೆಲ್ವ ಕುಮಾರ್**

ಸರ್ಕಾರದ ಉಪ ಕಾರ್ಯದರ್ಶಿ,

ಪಿ.ಆರ್. 1287 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು).

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಶ್ರೀ ಜಗನ್ನಾಥ ಎಂ. ಜಂಗಮಶೆಟ್ಟಿ, ಪದವೀಧರ ಇಂಜಿನಿಯರ್ (ಎಂ.ಆರ್.ಇ) ಇವರು ದಿನಾಂಕ: 27.07.2002ಕ್ಕೆ ದಿನಗೂಲಿ ನೌಕರರಾಗಿ ಹತ್ತು ವರ್ಷಗಳ ಸೇವೆ ಸಲ್ಲಿಸಿರುವುದರಿಂದ ಸಕ್ರಮಗೊಳಿಸುವ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 30 ಪಿಡಬ್ಲ್ಯೂಸಿ 2003, ಬೆಂಗಳೂರು, ದಿನಾಂಕ: 30ನೇ ಸೆಪ್ಟೆಂಬರ್, 2003**

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ:29.09.94.
2) ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯೂಡಿ 357 ಪಿಡಬ್ಲ್ಯೂಸಿ 90 ದಿನಾಂಕ: 02.12.94.
3) ಸರ್ಕಾರದ ಪತ್ರ ಸಂಖ್ಯೆ: ಪಿಡಬ್ಲ್ಯೂಡಿ 201 ಪಿಡಬ್ಲ್ಯೂಸಿ 95, ದಿನಾಂಕ: 02.07.94, 01.09.95 ಮತ್ತು 13.09.95.
4) ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯೂಡಿ 97 ಪಿಡಬ್ಲ್ಯೂಸಿ 99, ದಿನಾಂಕ: 25.09.99.
5) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದ) ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಬಿಎಸ್:224-ಇಎಸ್‌ಎಂ-ದಿನೌಸೇ:2002-03 ದಿನಾಂಕ: 29.04.2003.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶದಲ್ಲಿ ಸರ್ವೋಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 737:90, 738:90, 1038:90 ಮತ್ತು 297:91ರಲ್ಲಿ ನೀಡಿರುವ ಆದೇಶದನ್ವಯ ದಿನಾಂಕ: 01.07.84ರ ನಂತರ ಹಾಗೂ 15.10.92ಕ್ಕೆ ಮೊದಲು ದಿನಗೂಲಿಯಲ್ಲಿ ನೇಮಕ ಹೊಂದಿದ ಪದವೀಧರ ಮತ್ತು ಡಿಪ್ಲೋಮಾ ಇಂಜಿನಿಯರ್‌ರನ್ನು ಹಲವು ಷರತ್ತುಗಳಿಗೆ ಒಳಪಟ್ಟಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಲು ಆದೇಶಿಸಿದೆ.

ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಸಿ.ಆ.ಸು.ಇಲಾಖೆಯ ಆದೇಶಾನುಸಾರ ಕ್ರಮ ಸಂಖ್ಯೆ: (2)ರ ಆದೇಶದಲ್ಲಿ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳಲ್ಲಿ ದಿನಾಂಕ: 01.07.84ರ ನಂತರ 15.10.92ಕ್ಕೆ ಮುಂಚೆ ನೇಮಕ ಹೊಂದಿದ ಪದವೀಧರ ಹಾಗೂ ಡಿಪ್ಲೋಮಾ ಇಂಜಿನಿಯರ್‌ರನ್ನು ದಿನಾಂಕ: 29.09.94ರಿಂದ ಜಾರಿಗೆ ಬರುವಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಿ ಆದೇಶವನ್ನು ಹೊರಡಿಸಲಾಗಿದೆ. ದಿನಾಂಕ: 29.09.94ರ ಆದೇಶದಲ್ಲಿ ಕಂಡಿಕೆ 6 ಮತ್ತು 7ರಲ್ಲಿ ದಿನಗೂಲಿ ಸೇವೆಯಲ್ಲಿ 10 ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸಲು ಸಹ ಆದೇಶಿಸಲಾಗಿದೆ. ಪದವೀಧರ ಇಂಜಿನಿಯರರಿಗೆ ಸಂಬಂಧಿಸಿದಂತೆ ಸರ್ಕಾರದ ವತಿಯಿಂದಲೂ ಹಾಗೂ ಡಿಪ್ಲೋಮಾ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಆಯಾ ಮುಖ್ಯ ಇಂಜಿನಿಯರ್‌ರವರು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ನಿರ್ದೇಶಿಸಲಾಗಿದೆ.

ಕ್ರಮ ಸಂಖ್ಯೆ: (3)ರಲ್ಲಿ ಓದಲಾದ ಪತ್ರಗಳಲ್ಲಿ ಹತ್ತು ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸುವ ಸಲುವಾಗಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳ ಎಲ್ಲಾ ಮುಖ್ಯ ಇಂಜಿನಿಯರ್‌ಗಳನ್ನು ಕೋರಲಾಗಿದೆ.

ಅದರಂತೆ ಕ್ರಮ ಸಂಖ್ಯೆ: (4)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ(ದ), ಬೆಂಗಳೂರು ಇವರಿಂದ ಸ್ವೀಕೃತವಾದ ಪ್ರಸ್ತಾವನೆಯನ್ನು ಪರಿಶೀಲಿಸಿ ಸಿ.ಆ.ಸು. ಇಲಾಖೆಯ ಸಂಖ್ಯೆ: ಡಿಪಿಎಆರ್:13:ಎಸ್‌ಎಲ್‌ಸಿ 94 ದಿನಾಂಕ: 29.09.94 ಹಾಗೂ ಪಿಡಬ್ಲ್ಯೂಡಿ 97 ಪಿಡಬ್ಲ್ಯೂಸಿ 99 ದಿನಾಂಕ: 25.09.99ರ ಆದೇಶದನ್ವಯ ಮಾಸಿಕ ವೇತನದಡಿಯಲ್ಲಿ ಕೆಲಸ

ಮಾಡುತ್ತಿರುವ ಸಹಾಯಕ ಇಂಜಿನಿಯರ್‌ರನ್ನು ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಲೋಕೋಪಯೋಗಿ ಇಲಾಖೆಗಳಲ್ಲಿ ದಿನಾಂಕ: 01.07.84ರ ನಂತರ ಹಾಗೂ 15.10.92ಕ್ಕೆ ಮುಂಚೆ ದಿನಗೂಲಿ ಆಧಾರದ ಮೇಲೆ ನೇಮಕಗೊಂಡು ಮಾಸಿಕ ವೇತನ ವ್ಯವಸ್ಥೆಯಡಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್‌ಎಲ್‌ಸಿ: 94 ದಿನಾಂಕ: 29.09.94 ಹಾಗೂ ಪಿಡಬ್ಲ್ಯೂಡಿ 97 ಪಿಡಬ್ಲ್ಯೂಸಿ 99, ದಿನಾಂಕ: 25.09.99ರ ಆದೇಶಗಳಲ್ಲಿ ವಿಧಿಸಿರುವ ಷರತ್ತುಗಳನ್ನು ಪೂರೈಸಿದ ಈ ಕೆಳಕಂಡ ಪದವೀಧರ ಇಂಜಿನಿಯರ್‌ರನ್ನು ಅವರ ಮುಂದೆ ಸೂಚಿಸಲಾಗಿರುವ ದಿನಾಂಕದಿಂದ ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಹೆಸರು | ದಿನಗೂಲಿಗೆ ಸೇರಿದ ದಿನಾಂಕ | 10 ವರ್ಷ ಸೇವೆ ಪೂರೈಸಿದ ದಿನಾಂಕ | ಕ್ರಮಬದ್ಧಗೊಂಡ ದಿನಾಂಕ | ಕಾರ್ಯ ನಿರ್ವಹಿಸುತ್ತಿರುವ ಸ್ಥಳ |
|---|---|---|---|---|---|
| 1. | ಶ್ರೀ ಜಗನ್ನಾಥ ಎಂ. ಜಂಗಮಶೆಟ್ಟಿ, ಪದವೀಧರ ಇಂಜಿನಿಯರ್ | 05.06.1992 27.07.1992 | 26.07.2002 | 27.07.2002 | ಲೋಇ ಉಪ ವಿಭಾಗ, ಶಿಕಾರಿಪುರ. |

ಸದರಿ ನೌಕರರಿಗೆ ಆದೇಶ ಹೊರಡಿಸಿದ ದಿನಾಂಕದಿಂದ ಆರ್ಥಿಕ ಸೌಲಭ್ಯ ಹಾಗೂ ಸೇವಾ ಹಿರಿತನವನ್ನು ನೀಡಲು ಪರಿಗಣಿಸತಕ್ಕದ್ದು.

ಸಕ್ರಮ ಸೇವೆಯಲ್ಲಿ ವಿಲೀನಗೊಂಡ ನಂತರ ಮೇಲ್ಕಂಡ ಸಹಾಯಕ ಇಂಜಿನಿಯರ್‌ರನ್ನು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದ) ಬೆಂಗಳೂರು ಇವರ ವಶಕ್ಕೆ ನೀಡಿ ಮುಂದಿನ ಸ್ಥಳ ನಿಯುಕ್ತಿ ಆದೇಶ ನೀಡಲು ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಿದೆ. ಇವರು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದ) ಬೆಂಗಳೂರು ಇವರಲ್ಲಿ ಕಾರ್ಯವರದಿ ಮಾಡುವುದು.

ಈ ಆದೇಶವನ್ನು ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ: 29.09.94ರ ಆದೇಶದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವೈ. ಸಾಗರ್**

ಪೀಠಾಧಿಕಾರಿ,

ಪಿ.ಆರ್. 1288 ಲೋಕೋಪಯೋಗಿ ಇಲಾಖೆ (ಸೇವೆಗಳು-ಸಿ).

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** ಕೊಡಗು ಜಿಲ್ಲೆಯ ಕುಶಾಲನಗರದ ರೇಷ್ಮೆಗೂಡು ಮಾರುಕಟ್ಟೆಯ ಅವ್ಯವಹಾರ-ಶಿಸ್ತುಕ್ರಮ- ಇಲಾಖೆ ವಿಚಾರಣೆ ಕಾಯ್ದಿರಿಸಿ ಮರು ನೇಮಕದ ಬಗ್ಗೆ.

**ಓದಿದೆ:** 1) ಆದೇಶ ಸಂ: ವಾಕೈ 536 ರೇಸೇವಿ 2002, ದಿನಾಂಕ: 24.04.2003.

2) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಇವರ ಪತ್ರ ಸಂಖ್ಯೆ: ಸಿಬ್ಬಂದಿ (3)ಶಿಸ್ತು:15:2002-03, ದಿನಾಂಕ: 15.08.2003.

**ಪ್ರಸ್ತಾವನೆ:**

ಕೊಡಗು ಜಿಲ್ಲೆಯ ಕುಶಾಲನಗರದ ದ್ವಿತಳಿ ರೇಷ್ಮೆಗೂಡು ಮಾರುಕಟ್ಟೆಯಲ್ಲಿ ರೇಷ್ಮೆ ಸಹಾಯಕ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಬಿ.ಎನ್. ಶಾಂತಮಲ್ಲೇಶಪ್ಪ, ಹಾಗೂ ಸಂಖ್ಯಾತಿರಿಕ್ತ ರೇಷ್ಮೆ ಪ್ರವರ್ತಕ ಶ್ರೀ ಚಂದ್ರಪ್ಪ ಇವರುಗಳು ಮಾರುಕಟ್ಟೆ ವಹಿವಾಟಿಗೆ ರೈತರು ತರುವ ಗೂಡುಗಳನ್ನು ಅಕ್ರಮವಾಗಿ ಕದಿಯುತ್ತಿರುವರೆಂದೂ ಹಾಗೂ ಕೂಲಿಗಾಗಿ ಕಾಳುಯೋಜನೆಯಡಿಲ್ಲಿಯೂ ಸಹ ಅವ್ಯವಹಾರ ನಡೆಸಿರುವುದು ಮೇಲ್ನೋಟಕ್ಕೆ ಕಂಡುಬಂದಿದ್ದರಿಂದ ಇವರೀರ್ವರಿಗೂ ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಅಮಾನತ್ತುಗೊಳಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಬೆಂಗಳೂರು, ಇವರೀರ್ವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ನಿಟ್ಟಿನಲ್ಲಿ ದೋಷಾರೋಪಣಾ ಪಟ್ಟಿಯನ್ನು ಸಮರ್ಥನೀಯವಾದ ದಾಖಲೆಗಳ ಪರಿಶೀಲನೆ ನಡೆಸುತ್ತಿರುವುದಾಗಿ ತಿಳಿಸಿ, ಇಲಾಖೆಯ ಪುನರ್ ಸಂಘಟನೆಯ ಬಗ್ಗೆ ಅಂತಿಮ ಆದೇಶ ಹೊರಡಿಸಿಲ್ಲದಿರುವುದರಿಂದ ಇವರೀರ್ವರ ಅಮಾನತ್ತನ್ನು ತೆರವುಗೊಳಿಸಿ ಮರುನೇಮಕ ಮಾಡಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 536 ರೇಸೇವಿ 2002, ಬೆಂಗಳೂರು, ದಿನಾಂಕ: 7ನೇ ಅಕ್ಟೋಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ, ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು 1957ರ ನಿಯಮ 5(ಸಿ)ರಲ್ಲಿ ಪ್ರದತ್ತವಾಗಿರುವ ಅಧಿಕಾರಗಳನ್ನು ಚಲಾಯಿಸಿ ಕೊಡಗು ಜಿಲ್ಲೆಯ ಕುಶಾಲನಗರದ ದ್ವಿತಳಿ ರೇಷ್ಮೆಗೂಡು ಮಾರುಕಟ್ಟೆಯಲ್ಲಿ ಎಸಗಿದ್ದಾರೆನ್ನಲಾದ ಕೆಲವು ಆರೋಪಗಳ ವಿರುದ್ಧ ವಿಚಾರಣೆಯನ್ನು ಕಾಯ್ದಿರಿಸಿ ಈ ಕೆಳಕಂಡ ಅಧಿಕಾರಿ:ನೌಕರರನ್ನು ಅಮಾನತ್ತಿನಿಂದ ಹಿಂತೆಗೆದುಕೊಂಡು ಕೆಲಸದ ಮೇಲೆ ಪುನರ್ ನೇಮಕ ಮಾಡಿ ಅವರುಗಳ ಹೆಸರಿನ ಮುಂದೆ ತೋರಿಸಿರುವ ಸ್ಥಳಗಳಲ್ಲಿ ನೇಮಕ ಮಾಡಿದೆ.

| | | |
|---|---|---|
| 1) | ಶ್ರೀ ಬಿ.ಎನ್. ಶಾಂತಮಲ್ಲೇಶಪ್ಪ,<br>ರೇಷ್ಮೆ ಸಹಾಯಕ ನಿರ್ದೇಶಕರು. | ರೇಷ್ಮೆ ಸಹಾಯಕ ನಿರ್ದೇಶಕರು,<br>ನಂಜನಗೂಡು ವಿಭಾಗ- ಖಾಲಿ ಹುದ್ದೆಯಲ್ಲಿ |
| 2) | ಶ್ರೀ ಎಂ.ಎನ್. ಚಂದ್ರಪ್ಪ,<br>ಸಂಖ್ಯಾತಿರಿಕ್ತ ರೇಷ್ಮೆ ಪ್ರವರ್ತಕ. | ತಾಂತ್ರಿಕ ಸೇವಾ ಕೇಂದ್ರ,<br>ಸೋಮವಾರ ಪೇಟೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮಂಜೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1289 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ವೈದ್ಯಕೀಯ ಕಾಲೇಜುಗಳಲ್ಲಿ ಮತ್ತು ದಂತ ಕಾಲೇಜುಗಳಲ್ಲಿ ಎಂ.ಬಿ.ಬಿ.ಎಸ್. ಕೋರ್ಸನ್ನು ಮತ್ತು ಬಿ.ಡಿ.ಎಸ್. ಕೋರ್ಸನ್ನು ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳ ಪರಸ್ಪರ ವರ್ಗಾವಣೆ.

**ಓದಿದೆ:** 1) ದಿನಾಂಕ: 03.09.2001 ಸಂಖ್ಯೆ: ಆಕುಕ 145 ಎಂಪಿಎಸ್ 2001ರ ಸರ್ಕಾರಿ ಆದೇಶ.

2) ದಿನಾಂಕ: 27.08.2003 ಸಂಖ್ಯೆ: ಎಂಸಿಎಸ್/69/2003-04ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.

**ಪ್ರಸ್ತಾವನೆ:**

1) 1997ರ ಕರ್ನಾಟಕ ಇಂಜಿನಿಯರಿಂಗ್, ವೈದ್ಯಕೀಯ ಮತ್ತು ದಂತ ಕೋರ್ಸುಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಯ ಉಪಬಂಧಗಳ ಅನುಸಾರ ವೈದ್ಯಕೀಯ ಕಾಲೇಜುಗಳಲ್ಲಿ ಎಂ.ಬಿ.ಬಿ.ಎಸ್. ಕೋರ್ಸಿಗೆ ಪ್ರವೇಶ ಪಡೆದ ಮತ್ತು ದಂತ ಕಾಲೇಜುಗಳಲ್ಲಿ ಬಿ.ಡಿ.ಎಸ್. ಕೋರ್ಸಿಗೆ ಪ್ರವೇಶ ಪಡೆದ ಅಭ್ಯರ್ಥಿಗಳು ಒಂದು ಕಾಲೇಜಿನಿಂದ ಮತ್ತೊಂದು ಕಾಲೇಜಿಗೆ ಯಾವ ಪ್ರವರ್ಗದ ಸೀಟಿಗೆ ಪ್ರವೇಶ ಪಡೆದಿರುತ್ತಾರೋ ಅದೇ ಪ್ರವರ್ಗದ ಸೀಟಿನಲ್ಲಿ ಒಂದು ಕಾಲೇಜಿನಿಂದ ಮತ್ತೊಂದು ಕಾಲೇಜಿಗೆ ಪರಸ್ಪರ ವರ್ಗಾವಣೆ ಹೊಂದಲು ಅವಕಾಶ ಕಲ್ಪಿಸಲಾಗಿತ್ತು. ಅಂತಹ ಪರಸ್ಪರ ವರ್ಗಾವಣೆಗೆ ನಿರ್ದಿಷ್ಟ ಕಾಲಮಿತಿಯನ್ನು ನಿಗದಿಪಡಿಸಲಾಗಿತ್ತು.

2) ದಿನಾಂಕ: 31.10.2002ರ ಸರ್ವೋಚ್ಚ ನ್ಯಾಯಾಲಯದ 11 ನ್ಯಾಯಾಧೀಶರ ಪೀಠದ ತೀರ್ಪಿನಿಂದ ಉದಯಿಸಿದ ಸನ್ನಿವೇಶದನುಸಾರ 2003ರ ಕರ್ನಾಟಕ ಇಂಜಿನಿಯರಿಂಗ್, ವೈದ್ಯಕೀಯ, ದಂತ ಮತ್ತು ಭಾರತೀಯ ವೈದ್ಯಪದ್ಧತಿ ಹಾಗೂ ಹೋಮಿಯೋಪತಿ ಕೋರ್ಸುಗಳ ಪ್ರವೇಶಕ್ಕಾಗಿ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಯನ್ನು ದಿನಾಂಕ: 29.05.2003ರಿಂದ ಜಾರಿಗೊಳಿಸಲಾಗಿತ್ತು. ಸದರಿ ನಿಯಮಾವಳಿಯ 2(ಹೆಚ್)ನೇ ನಿಯಮದೊಂದಿಗೆ ಓದಲಾದ 4ನೇ ನಿಯಮದ ಪ್ರಕಾರ ಪ್ರವರ್ಗ-1, ಪ್ರವರ್ಗ-2, ಪ್ರವರ್ಗ-3 ಹಾಗೂ ಮ್ಯಾನೇಜ್‌ಮೆಂಟ್ ಸೀಟುಗಳಡಿ ಅಭ್ಯರ್ಥಿಗಳನ್ನು ಮೇಲ್ಕಂಡ ವೃತ್ತಿಪರ ಕೋರ್ಸುಗಳಲ್ಲಿ ಪ್ರವೇಶ ಪಡೆಯಲು ಅವಕಾಶ ಕಲ್ಪಿಸಲಾಗಿದೆ. ಅದನ್ನು ಕರ್ನಾಟಕ ಉಚ್ಚನ್ಯಾಯಾಲಯದಲ್ಲಿ ಪ್ರಶ್ನಿಸಲಾಗಿತ್ತು. ದಿನಾಂಕ: 30.06.2003ರ ಮಧ್ಯಂತರ ಆಜ್ಞೆಯನ್ನು ಸದರಿ ನಿಯಮಾವಳಿಯ ವಿಧಿಸಮ್ಮತವನ್ನು ಕೆಲವು ಮಾರ್ಪಾಡುಗಳೊಂದಿಗೆ ಎತ್ತಿ ಹಿಡಿದು ಶುಲ್ಕ ವಿನ್ಯಾಸವನ್ನು ಕೆಲವು ಕೋರ್ಸುಗಳಿಗೆ ನಿಗದಿಗೊಳಿಸಲಾಗಿದೆ. ಈ ಮಧ್ಯಂತರ ಆಜ್ಞೆಯನ್ನು ಸರ್ವೋಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಲಾಗಿತ್ತು. ದಿನಾಂಕ: 14.08.2003ರ ತೀರ್ಪಿನ ನಂತರ ಸರ್ಕಾರ ಮತ್ತು ಮ್ಯಾನೇಜ್‌ಮೆಂಟ್ ನಡುವೆ ಸೀಟು ಹಂಚಿಕೆಗಳ ಅನುಪಾತವನ್ನು ಅಂಶಿಕವಾಗಿ ಮಾರ್ಪಡಿಸಿ ಸದರಿ ನಿಯಮಾವಳಿಯನ್ನು ಪರಿಷ್ಕರಿಸಲಾಯಿತು. ಈ ಮಧ್ಯೆ ಸಿ.ಇ.ಟಿ. ಘಟಕದಿಂದ ವೈದ್ಯಕೀಯ ಮತ್ತು ದಂತ ಕಾಲೇಜುಗಳಲ್ಲಿ ಎಂ.ಬಿ.ಬಿ.ಎಸ್. ಮತ್ತು ಬಿ.ಡಿ.ಎಸ್. ಕೋರ್ಸುಗಳ ಪ್ರವೇಶಕ್ಕೆ ಆಯ್ಕೆಗೊಂಡು ಪ್ರವೇಶ ಪಡೆದಿರುವ ಕೆಲವು ವಿದ್ಯಾರ್ಥಿಗಳು ಪರಸ್ಪರ ವರ್ಗಾವಣೆಗೆ ಬೇಡಿಕೆ ಸಲ್ಲಿಸಿರುವ ಹಿನ್ನೆಲೆಯಲ್ಲಿ ಪರಸ್ಪರ ವರ್ಗಾವಣೆ ಮಾಡಲು ಸರ್ಕಾರದ ಆದೇಶವನ್ನು ಹೊರಡಿಸುವಂತೆ ವೈದ್ಯಕೀಯ ಶಿಕ್ಷಣ ನಿರ್ದೇಶಕರು ಕೋರಿದ್ದರೆ.

3) 2003-2004ನೇ ಶೈಕ್ಷಣಿಕ ವರ್ಷದಲ್ಲಿ ಕೆಲವು ಷರತ್ತುಗಳ ಮೇಲೆ ಪರಸ್ಪರ ವರ್ಗಾವಣೆಯನ್ನು ಜಾರಿಗೊಳಿಸುವುದು ಸೂಕ್ತವೆಂದು ಸರ್ಕಾರ ನಿರ್ಧರಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 22 ಎಂಪಿಎಸ್ 2003, ಬೆಂಗಳೂರು, ದಿನಾಂಕ: 8ನೇ ಅಕ್ಟೋಬರ್, 2003**

4) 2003-04ನೇ ಶೈಕ್ಷಣಿಕ ವರ್ಷದಲ್ಲಿ ಸಾಮಾನ್ಯ ಪ್ರವೇಶ ಪರೀಕ್ಷಾ ಕೌನ್ಸಿಲಿಂಗ್ ಮೂಲಕ ಸರ್ಕಾರಿ ಮತ್ತು ಖಾಸಗಿ ವೈದ್ಯಕೀಯ ಮತ್ತು ದಂತ ಕಾಲೇಜುಗಳಲ್ಲಿ ಎಂ.ಬಿ.ಬಿ.ಎಸ್. ಕೋರ್ಸ್‌ಗೆ ಮತ್ತು ಬಿ.ಡಿ.ಎಸ್. ಕೋರ್ಸಿಗೆ ದಿನಾಂಕ: 30.09.2003ಕ್ಕೆ ಮೊದಲು ಪ್ರವೇಶ ಪಡೆದಿರುವ ಅಭ್ಯರ್ಥಿಗಳು ಒಂದು ವೈದ್ಯಕೀಯ ಕಾಲೇಜಿನಿಂದ ಮತ್ತೊಂದು ವೈದ್ಯಕೀಯ ಕಾಲೇಜಿಗೆ ಹಾಗೂ ಒಂದು ದಂತ ಕಾಲೇಜಿನಿಂದ ಮತ್ತೊಂದು ದಂತ ಕಾಲೇಜಿಗೆ ಪರಸ್ಪರ ವರ್ಗಾವಣೆಯನ್ನು ಈ ಕೆಳಕಂಡ ಸೂತ್ರಗಳಂತೆ ಪಡೆಯಲು ಅನುಮತಿಸಲಾಗಿದೆ.

(1) 1ನೇ ಪ್ರವರ್ಗದ ಸರ್ಕಾರಿ ಸೀಟುಗಳಿಂದ 1ನೇ ಪ್ರವರ್ಗದ ಸರ್ಕಾರಿ ಸೀಟುಗಳಿಗೆ.

(2) 2ನೇ ಪ್ರವರ್ಗದ ಸರ್ಕಾರಿ ಸೀಟುಗಳಿಂದ 2ನೇ ಅಥವಾ 3ನೇ ಪ್ರವರ್ಗದ ಸರ್ಕಾರಿ ಸೀಟುಗಳಿಗೆ.

(3) 3ನೇ ಪ್ರವರ್ಗದ ಸರ್ಕಾರಿ ಸೀಟುಗಳಿಂದ 3ನೇ ಪ್ರವರ್ಗದ ಅಥವಾ 2ನೇ ಪ್ರವರ್ಗದ ಸರ್ಕಾರಿ ಸೀಟುಗಳಿಗೆ.

(4) ಪರಸ್ಪರ ವರ್ಗಾವಣೆಗೆ ಅರ್ಜಿಸಲ್ಲಿಸುವ ಪ್ರತಿಯೊಬ್ಬ ವಿದ್ಯಾರ್ಥಿಯಿಂದ ತಲಾ ಒಂದು ಸಾವಿರ ರೂಪಾಯಿಗಳ ವರ್ಗಾವಣೆ ಶುಲ್ಕವನ್ನು ಪಡೆಯತಕ್ಕದ್ದು. ಅದನ್ನು ಸರ್ಕಾರದ ನಿಧಿಗೆ ಜಮೆ ಮಾಡತಕ್ಕದ್ದು.

(5) ಒಮ್ಮೆ ಪರಸ್ಪರ ವರ್ಗಾವಣೆ ಪಡೆದ ಅಭ್ಯರ್ಥಿಗಳು ಯಾವುದೇ ಕಾರಣಕ್ಕೂ ಮತ್ತೊಮ್ಮೆ ಪರಸ್ಪರ ವರ್ಗಾವಣೆಯಾಗಲೀ ಅಥವಾ ಯಾವುದೇ ಸ್ವರೂಪದ ವರ್ಗಾವಣೆಗಾಗಲೀ ಅರ್ಹರಾಗಿರುವುದಿಲ್ಲ.

(6) ವೈದ್ಯಕೀಯ ಶಿಕ್ಷಣ ನಿರ್ದೇಶಕರು ಪ್ರಸ್ತುತ ಪರಸ್ಪರ ವರ್ಗಾವಣೆಯನ್ನು ವಿದ್ಯುಕ್ತವಾದ ಆದೇಶದ ಮೂಲಕ ಜಾರಿಗೊಳಿಸಲು ಸಕ್ಷಮ ಪ್ರಾಧಿಕಾರವಾಗಿರುತ್ತಾರೆ.

(7) ಮೇಲ್ಕಂಡ ವಿದ್ಯಾರ್ಥಿಗಳ ಪರಸ್ಪರ ವರ್ಗಾವಣೆಯನ್ನು ದಿನಾಂಕ: 15ನೇ ಅಕ್ಟೋಬರ್ 2003ಕ್ಕೆ ಮೊದಲು ಅಂತಿಮಗೊಳಿಸಬೇಕು. ಯಾವುದೇ ಕಾರಣಕ್ಕೂ ಈ ಪರಸ್ಪರ ವರ್ಗಾವಣೆಗೆ ಕಾಲಮಿತಿಯನ್ನು ವಿಸ್ತರಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾಗರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1290 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

**ವಿಷಯ:** ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಮತ್ತು ಮೈಸೂರಿನ ಕೆ.ಆರ್. ಆಸ್ಪತ್ರೆಯಲ್ಲಿ ಕೋಬಾಲ್ಟ್ ಥೆರಪಿ ಘಟಕಗಳ ಸ್ಥಾಪನೆ ಮತ್ತು ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆಯಿಂದ ಅವುಗಳ ನಿರ್ವಹಣೆ.

**ಓದಿದೆ:**
1) ದಿನಾಂಕ: 27.06.2001 ಸಂಖ್ಯೆ: MEB(2)13/2001-02ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.
2) ದಿನಾಂಕ: 03.06.2002 ಸಂಖ್ಯೆ:DME/PS /17/2002-03ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.
3) ದಿನಾಂಕ: 27.11.2002 ಸಂಖ್ಯೆ:SUX(ME)196:2001-02ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.
4) ದಿನಾಂಕ: 01.01.2003 ಸಂಖ್ಯೆ:COMTP/LOK/BCD/206:2001:ARE-5ರ ಕರ್ನಾಟಕ ಲೋಕಾಯುಕ್ತರ ಅಡಿಷನಲ್ ರಿಜಿಸ್ಟ್ರಾರ್ ವಿಚಾರಣೆ-5 ರವರ ಪತ್ರ.
5) ದಿನಾಂಕ: 07.02.2003 ಸಂಖ್ಯೆ: ಆಕುಕ 435: ಎಂ.ಎಸ್.ಎಫ್. 2001ರ ಸರ್ಕಾರಿ ಆದೇಶ.
6) ದಿನಾಂಕ: 15.02.2003 ಮತ್ತು 15.03.2003 ಸಂಖ್ಯೆ:SUX(ME)/183/ 2002-03ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.
7) ದಿನಾಂಕ: 04.04.2003ರ ಸಂಖ್ಯೆ:KMIO/ಸಿಬ್ಬಂದಿ:1:3:2003-04ರ ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆಯ ಪತ್ರ.
8) ದಿನಾಂಕ: 19.06.2003 ಸಂಖ್ಯೆ:MEB(2) 13/2001-02ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.
9) ದಿನಾಂಕ: 06.08.2003ರ ಸಂಖ್ಯೆ:SUX(ME)/197/2001-02ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.

**ಪೀಠಿಕೆ:**

1) ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಮತ್ತು ಮೈಸೂರಿನ ಕೆ.ಆರ್. ಆಸ್ಪತ್ರೆಯಲ್ಲಿ ಕೋಬಾಲ್ಟ್ ಥೆರಪಿ, ಘಟಕವನ್ನು ಸ್ಥಾಪಿಸುವ ವಿಚಾರವನ್ನು ವೈದ್ಯಕೀಯ ಶಿಕ್ಷಣ ನಿರ್ದೇಶಕರೊಂದಿಗೆ ಸಮಾಲೋಚಿಸಲಾಗಿತ್ತು. ನಂತರ ದಿನಾಂಕ: 27.09.2002 ಹಾಗೂ ದಿನಾಂಕ: 07.05.2003ರಂದು ನಡೆದ ಸಭೆಗಳಲ್ಲಿ ಸವಿಸ್ತಾರವಾಗಿ ಚರ್ಚಿಸಲಾಗಿತ್ತು. ಬೆಂಗಳೂರು ವೈದ್ಯಕೀಯ ಕಾಲೇಜಿನ ಬೋಧನಾ ಆಸ್ಪತ್ರೆಯಾದ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಮತ್ತು ಮೈಸೂರು ವೈದ್ಯಕೀಯ ಕಾಲೇಜಿನ ಬೋಧನಾ ಆಸ್ಪತ್ರೆಯಾದ ಕೆ.ಆರ್. ಆಸ್ಪತ್ರೆಯಲ್ಲಿ ಕೋಬಾಲ್ಟ್ ಥೆರಪಿ ಘಟಕಗಳನ್ನು ಸ್ಥಾಪಿಸಿ ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆಯ ನಿರ್ವಹಣೆಗೆ ವಹಿಸಲು ತಾತ್ವಿಕವಾಗಿ ನಿರ್ಣಯಿಸಲಾಗಿತ್ತು. ವಿಕ್ಟೋರಿಯಾ ಆಸ್ಪತ್ರೆಯ ಕೋಬಾಲ್ಟ್ ಥೆರಪಿ ಘಟಕದ ಕಾಮಗಾರಿಗಳು ಮುಕ್ತಾಯವಾಗಿದ್ದು ರೋಗಿಗಳ ಹಿತದೃಷ್ಟಿಯಿಂದ ಕೋಬಾಲ್ಟ್ ಥೆರಪಿ ಘಟಕವನ್ನು ತಕ್ಷಣ ಸ್ಥಾಪಿಸಿ ಚಾಲನೆ ನೀಡಲು ಹಾಗೂ ಕೆ.ಆರ್. ಆಸ್ಪತ್ರೆಯ ಘಟಕದ ಕಾಮಗಾರಿಗಳು ಪ್ರಗತಿಯಲ್ಲಿದ್ದು ಅದು ಮುಕ್ತಾಯಗೊಂಡ ನಂತರ ಅದನ್ನು ಸ್ಥಾಪಿಸಿ ನಿರ್ವಹಣೆಯನ್ನು ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆಗೆ ವಹಿಸಬೇಕೆಂದು ಈ ಹಿಂದೆ ತೀರ್ಮಾನಿಸಲಾಗಿತ್ತು. ಪ್ರತಿಘಟಕದ ನಿರ್ವಹಣೆಗಾಗಿ 16.08 ಲಕ್ಷ ರೂ.ಗಳ ವಾರ್ಷಿಕ ವೆಚ್ಚ ಉಂಟಾಗುತ್ತದೆಂದು ಅಂದಾಜಿಸಲಾಗಿತ್ತು. ಆ ಪೈಕಿ ಉಪಕರಣಗಳ ವಾರ್ಷಿಕ ನಿರ್ವಹಣೆಯ ಬಾಬ್ತು 2 ಲಕ್ಷ ರೂ ಮತ್ತು ಕಛೇರಿ ವೆಚ್ಚದ ಬಾಬ್ತು 1 ಲಕ್ಷ ರೂ. ಗಳನ್ನು ಹಾಗೂ ಗ್ಯಾರಂಟಿ ಅವಧಿಯಲ್ಲಿ ವೈದ್ಯಕೀಯ ವೆಚ್ಚವನ್ನು ಕಳೆದು ಪ್ರತಿ ಘಟಕಕ್ಕೆ 14.08 ಲಕ್ಷ ರೂ.ಗಳನ್ನು ಒಂದು ವರ್ಷಕ್ಕೆ ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆಗೆ ಸಂದಾಯ ಮಾಡಲು ಮತ್ತು ಈ ಎರಡು ಕೋಬಾಲ್ಟ್ ಥೆರಪಿ ಘಟಕಗಳನ್ನು ವಹಿಸಿಕೊಡುವ ದಿನಾಂಕದಿಂದ ಮೊದಲಿಗೆ ಒಂದುವರ್ಷದವರೆಗೆ ನಿರ್ವಹಣೆಗಾಗಿ ಪಾವತಿ ಮಾಡಲು ನಿರ್ಧರಿಸಲಾಯಿತು. ತದನಂತರ ಸದರಿ ವ್ಯವಸ್ಥೆಯನ್ನು ಮುಂದುವರೆಸುವ ಅಥವಾ ವಿಕ್ಟೋರಿಯಾ ಆಸ್ಪತ್ರೆ: ಕೆ.ಆರ್. ಆಸ್ಪತ್ರೆಗಳೇ ನಿರ್ವಹಿಸುವ ವಿಚಾರವನ್ನು ಸುಸಂಬದ್ದ ಸಮಯದಲ್ಲಿ ತೀರ್ಮಾನಿಸಲು ತತ್ವಶಃ ನಿರ್ಣಯಿಸಲಾಗಿತ್ತು. ಅದಕ್ಕೆ ತಗಲುವ ವಾರ್ಷಿಕ ವೆಚ್ಚವನ್ನು ವೈದ್ಯಕೀಯ ಶಿಕ್ಷಣ ಇಲಾಖೆಯ ಸಂಬಳದ ಅನುದಾನದಲ್ಲಿ ಭರಿಸಲು ಹಾಗೂ ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆಯಲ್ಲಿ ವಿಧಿಸುತ್ತಿರುವ ಅನುಬೋಗ ಶುಲ್ಕವನ್ನು ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಮತ್ತು ಕೆ.ಆರ್. ಆಸ್ಪತ್ರೆಯಲ್ಲಿಯೂ ಸಹ ವಿಧಿಸಲು ತೀರ್ಮಾನಿಸಲಾಯಿತು.

2) ದಿನಾಂಕ: 07.02.2003ರ ಸರ್ಕಾರಿ ಆದೇಶದಲ್ಲಿ ಮೇಲ್ಕಂಡ ಆಸ್ಪತ್ರೆಗಳಲ್ಲಿ ಕೋಬಾಲ್ಟ್ ಥೆರಪಿ ಘಟಕ ಸ್ಥಾಪಿಸುವ ಸಿವಿಲ್ ಕಾಮಗಾರಿ ಬಾಬಿನ ವೆಚ್ಚಕ್ಕಾಗಿ ಪ್ರಾಪ್ತವಾಗಿದ್ದ ಬಡ್ಡಿ ಹಣದ ಪೈಕಿ 27.45 ಲಕ್ಷ ರೂ.ಗಳನ್ನು ನಿಯಮಾನುಸಾರ ಹಾಗೂ ಸಿವಿಲ್ ಕಾಮಗಾರಿಗಳ ಪ್ರಗತಿಯನ್ನು ಖಚಿತಪಡಿಸಿಕೊಂಡು ಪಾವತಿ ಮಾಡಲು ಆತಳಿತಾತ್ಮಕ ಮಂಜೂರಾತಿ ನೀಡಲಾಗಿತ್ತು.

3) ಈ ವಿಚಾರವನ್ನು ಆರ್ಥಿಕ ಇಲಾಖೆಯ ಸಮಾಲೋಚನೆಯೊಂದಿಗೆ ಆಮೂಲಾಗ್ರವಾಗಿ ವಿಶ್ಲೇಷಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 191 ಎಂಎಸ್ಎಫ್ 2003, ಬೆಂಗಳೂರು, ದಿನಾಂಕ: 1ನೇ ಅಕ್ಟೋಬರ್, 2003**

4) ಬೆಂಗಳೂರು ವೈದ್ಯಕೀಯ ಕಾಲೇಜಿನ ಬೋಧನಾ ಆಸ್ಪತ್ರೆಯಾದ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಮತ್ತು ಮೈಸೂರು ವೈದ್ಯಕೀಯ ಕಾಲೇಜಿನ ಬೋಧನಾ ಆಸ್ಪತ್ರೆಯಾದ ಕೆ.ಆರ್. ಆಸ್ಪತ್ರೆಯಲ್ಲಿ ರೋಗಿಗಳ ಚಿಕಿತ್ಸೆಗಾಗಿ ತಲಾ ಒಂದೊಂದು ಕೋಬಾಲ್ಟ್ ಥೆರಪಿ ಘಟಕಗಳನ್ನು ಸ್ಥಾಪಿಸಲು ಮಂಜೂರಾತಿ ನೀಡಲಾಗಿದೆ.

5) ಸದರಿ ಘಟಕಗಳ ನಿರ್ವಹಣೆಗಾಗಿ ಪ್ರತಿ ಘಟಕಕ್ಕೆ 14.08 (ಹದಿನಾಲ್ಕು ಲಕ್ಷದ ಎಂಟು ಸಾವಿರ) ಲಕ್ಷ ರೂ.ಗಳನ್ನು ಒಂದು ವರ್ಷಕ್ಕೆ ಸೀಮಿತಗೊಳಿಸಿ ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆಗೆ ನಿರ್ವಹಣೆಗಾಗಿ ಸಂದಾಯಮಾಡಲು ಮಂಜೂರಾತಿ ನೀಡಲಾಗಿದೆ.

6) ಮೇಲ್ಕಂಡ ಕೋಬಾಲ್ಟ್ ಥೆರಪಿ ಘಟಕಗಳನ್ನು ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆಗೆ ಒಂದು ವರ್ಷದ ಅವಧಿಗೆ ಮಿತಿಗೊಳಿಸಿ ವಹಿಸಿಕೊಡಲು ಆದೇಶಿಸಲಾಗಿದೆ. ಯಾವುದೇ ಹೊಸ ಹುದ್ದೆಯನ್ನು ಸೃಜಿಸತಕ್ಕದ್ದಲ್ಲ ಹಾಗೂ ಯಾವುದೇ ವೆಚ್ಚವನ್ನು ಸರ್ಕಾರ ಭರಿಸತಕ್ಕದ್ದಲ್ಲ. ಸದರಿ ಘಟಕಗಳ ಸಕಲ ಪೋಷಣೆ ಮತ್ತು ನಿರ್ವಹಣೆಯನ್ನು ಅಗತ್ಯತೆಗೆ ತಕ್ಕಂತೆ ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆಯು ನೆರವೇರಿಸುವುದು.

7) ವೈದ್ಯಕೀಯ ಶಿಕ್ಷಣ ಇಲಾಖೆಯ ಸಂಬಳದ ಅನುದಾನದಲ್ಲಿ ಮೇಲ್ಕಂಡ ವಾರ್ಷಿಕ 28.16 (ಇಪ್ಪತ್ತೆಂಟು ಲಕ್ಷದ ಹದಿನಾರು ಸಾವಿರ) ಲಕ್ಷ ರೂ.ಗಳ ವೆಚ್ಚವನ್ನು ಭರಿಸತಕ್ಕದ್ದು. ಯಾವುದೇ ಹೆಚ್ಚುವರಿ ಅನುದಾನದ ಬೇಡಿಕೆಯನ್ನು ಈ ಉದ್ದೇಶಕ್ಕಾಗಿ ಸಲ್ಲಿಸತಕ್ಕದ್ದಲ್ಲ.

8) ಮೇಲ್ಕಂಡ ಘಟಕಗಳ ಒಂದು ವರ್ಷದವರೆಗಿನ ನಿರ್ವಹಣೆ ನಂತರ ಸದರಿ ವ್ಯವಸ್ಥೆಯನ್ನು ಮುಂದುವರೆಸುವ ಅಥವಾ ವಿಕ್ಟೋರಿಯಾ ಆಸ್ಪತ್ರೆ ಮತ್ತು ಕೆ.ಆರ್. ಆಸ್ಪತ್ರೆಗಳೇ ಸ್ವತಃ ನಿರ್ವಹಿಸುವ ವಿಚಾರದಲ್ಲಿ ಸಮುಚಿತ ಸಮಯದಲ್ಲಿ ಸರ್ಕಾರ ತತ್ವಶಃ ನಿಲುವನ್ನು ತೆಗೆದುಕೊಳ್ಳುವುದು.

9) ದಿನಾಂಕ: 11.08.2003 ಸಂಖ್ಯೆ: ಎಫ್‌ಡಿ 1447 ವೆಚ್ಚ (5) 2003ರ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆದು ಈ ಸರ್ಕಾರಿ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾಗರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1291 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ವೈದ್ಯಕೀಯ ಶಿಕ್ಷಣ).

## ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನಸೇವಾ ಸಚಿವಾಲಯ

**ವಿಷಯ:** ಕ್ಯಾ: ಅಲೋಷಿಯಸ್ ಪಿಂಟೋ ಸಹಾಯಕ ವಿಮಾನ ಹಾರಾಟ ಬೋಧಕರು, ಸರ್ಕಾರಿ ವೈಮಾನಿಕ ತರಬೇತಿ ಶಾಲೆ ಇವರ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆಯನ್ನು ನಡೆಸಲು ವಿಚಾರಣಾ ಪ್ರಾಧಿಕಾರ ಹಾಗೂ ಮಂಡನಾಧಿಕಾರಿಗಳ ಬದಲಾವಣೆ ಬಗ್ಗೆ.

**ಓದಲಾಗಿದೆ:**
1) ತಿಳುವಳಿಕೆ ಪತ್ರ ಸಂಖ್ಯೆ: ವಾಪ್ರಯು 238 ಯುಇಸೇ 99 ದಿನಾಂಕ: 15.12.2000.
2) ಕ್ಯಾಪ್ಟನ್ ಅಲೋಷಿಯಸ್ ಪಿಂಟೋ, ಸಹಾಯಕ ವಿಮಾನ ಬೋಧಕರು, ಸರ್ಕಾರಿ ವೈಮಾನಿಕ ಶಾಲೆ ಇವರ ಉತ್ತರ ದಿನಾಂಕ: 13.07.2001.
3) ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 238 ಯುಇಸೇ 99 ದಿನಾಂಕ: 20.09.2001.
4) ಮಾನ್ಯ ಮೂಲಭೂತ ಸೌಕರ್ಯ ಅಭಿವೃದ್ಧಿ ಮತ್ತು ನಾಗರೀಕ ವಿಮಾನಯಾನ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ: 30.07.2003ರಂದು ನಡೆದ ಸಭೆಯ ನಡವಳಿ.

**ಪ್ರಸ್ತಾವನೆ:**

ಸರ್ಕಾರಿ ವೈಮಾನಿಕ ತರಬೇತಿ ಶಾಲೆಯಲ್ಲಿ ಸಹಾಯಕ ವಿಮಾನ ಹಾರಾಟ ಬೋಧಕರಾಗಿ ಕಾರ್ಯನಿರ್ವಹಿಸುತ್ತಿರುವ ಕ್ಯಾ:ಅಲೋಷಿಯಸ್ ಪಿಂಟೊ ಇವರು ಇಲಾಖಾ ಮುಖ್ಯಸ್ಥರ ಪೂರ್ವಾನುಮತಿ ಇಲ್ಲದೇ ಅನಧಿಕೃತವಾಗಿ ಕಛೇರಿಗೆ ಗೈರು ಹಾಜರಾಗಿರುವುದು ಮುಂತಾದ ದುರ್ನಡತೆಗಳನ್ನು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರಡಿಯಲ್ಲಿ ಎಸಗಿದ್ದಾರೆಂದು ನಿರ್ದೇಶಕರು ಸರ್ಕಾರಿ ವೈಮಾನಿಕ ತರಬೇತಿ ಶಾಲೆ ಇವರು ವರದಿ ಮಾಡಿದ್ದು, ಅದರಂತೆ, ಮೇಲ್ಕಂಡ ಸರ್ಕಾರಿ ನೌಕರರ ಮೇಲೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರಲ್ಲಿರುವ ಅವಕಾಶಗಳಂತೆ ಆರೋಪ ಪಟ್ಟಿಯನ್ನು, ಆರೋಪ ವಿಷಯವನ್ನು ಸಮರ್ಥಿಸುವ ದುರ್ನಡತೆಯ ಆರೋಪಣೆಯ ವಿವರಣೆಯನ್ನು, ಆರೋಪವನ್ನು ಸಮರ್ಥಿಸುವ ದಾಸ್ತಾವೇಜುಗಳ ಪಟ್ಟಿಯನ್ನು ಹಾಗೂ ಆರೋಪ ಪರ ಸಾಕ್ಷಿಗಳ ಪಟ್ಟಿಯನ್ನು ಮೇಲೆ (1)ರಲ್ಲಿ ಓದಲಾದ ತಿಳುವಳಿಕೆ ಪತ್ರದೊಂದಿಗೆ ಜಾರಿ ಮಾಡಿ ಅಧಿಕಾರಿಯವರ ಸಮಜಾಯಿಷಿ ಕೋರಲಾಗಿತ್ತು, ಅದಕ್ಕೆ ಪ್ರತ್ಯುತ್ತರವಾಗಿ ಅಧಿಕಾರಿಯವರು ಮೇಲೆ (2)ರಲ್ಲಿ ಓದಲಾದ ತಮ್ಮ ಉತ್ತರದಲ್ಲಿ ತಮ್ಮ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿದ್ದರು. ಆದ್ದರಿಂದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ಸಲುವಾಗಿ ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು ನಿರ್ದೇಶಕರು, ಯುವಜನಸೇವಾ ಮತ್ತು ಕ್ರೀಡಾ ಇಲಾಖೆ ಇವರನ್ನು ವಿಚಾರಣಾಧಿಕಾರಿಯಾಗಿ ಹಾಗೂ ಶ್ರೀ ಆರ್.ಎಲ್. ಪಾಟೀಲ್, ಜಂಟಿ ನಿರ್ದೇಶಕರು ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮಾನ್ಯ ಮೂಲಭೂತ ಸೌಕರ್ಯ ಅಭಿವೃದ್ಧಿ ಮತ್ತು ನಾಗರೀಕ ವಿಮಾನಯಾನ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ: 30.07.2003ರಂದು ನಡೆದ ಮೇಲೆ (4)ರಲ್ಲಿ ಓದಲಾದ ಮೊದಲನೆಯ ಆಡಳಿತ ಮಂಡಳಿಯ ಸಭೆಯಲ್ಲಿ ಕ್ಯಾ:ಅಲೋಷಿಯಸ್ ಪಿಂಟೋ ಇವರ ವಿರುದ್ಧ ಹೂಡಲಾಗಿರುವ ಇಲಾಖಾ ವಿಚಾರಣೆಯು ವಿಳಂಬವಾಗುತ್ತಿರುವುದರಿಂದ ಈ ಇಲಾಖಾ ವಿಚಾರಣೆಯನ್ನು ತ್ವರಿತವಾಗಿ ಇತ್ಯರ್ಥಗೊಳಿಸಲು ಅನುಕೂಲವಾಗುವಂತೆ ನಿವೃತ್ತ ಜಿಲ್ಲಾ ನ್ಯಾಯಾಧೀಶರಿಗೆ ವಹಿಸಲು ತೀರ್ಮಾನವಾಗಿದೆ. ಆದುದರಿಂದ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ವಾಪ್ರಯು 238 ಯುಇಸೇ 99 (ಭಾಗ-1), ಬೆಂಗಳೂರು, ದಿನಾಂಕ: 30ನೇ ಸೆಪ್ಟೆಂಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಾಸ್ತವಾಂಶಗಳ ಹಿನ್ನಲೆಯಲ್ಲಿ, ಸರ್ಕಾರಿ ಆದೇಶ ಸಂಖ್ಯೆ: ವಾಪ್ರಯು 238 ಯುಇಸೇ 99 ದಿನಾಂಕ:20.09.2001ರಲ್ಲಿ ಕ್ಯಾ: ಅಲೋಷಿಯಸ್ ಪಿಂಟೋ, ಸಹಾಯಕ ವಿಮಾನ ಹಾರಾಟ ಬೋಧಕರು, ಸರ್ಕಾರಿ ವೈಮಾನಿಕ ತರಬೇತಿ ಶಾಲೆ ಬೆಂಗಳೂರು ಇವರ ವಿರುದ್ಧದ ಆರೋಪಗಳ ಬಗ್ಗೆ ವಿಚಾರಣೆಯನ್ನು ನಡೆಸಲು ನಿರ್ದೇಶಕರು, ಯುವಜನಸೇವಾ ಮತ್ತು ಕ್ರೀಡಾ ಇಲಾಖೆ ಇವರನ್ನು ವಿಚಾರಣಾಧಿಕಾರಿಯಾಗಿ ಹಾಗೂ ಶ್ರೀ ಆರ್.ಎಲ್. ಪಾಟೀಲ್, ಜಂಟಿ ನಿರ್ದೇಶಕರು ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಇವರನ್ನು ಮಂಡನಾಧಿಕಾರಿಯಾಗಿ ನೇಮಿಸಿ ಹೊರಡಿಸಿರುವ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ.

ಕ್ಯಾ:ಅಲೋಷಿಯಸ್ ಪಿಂಟೋ, ಸಹಾಯಕ ವಿಮಾನ ಹಾರಾಟ ಬೋಧಕರು ಅವರ ಮೇಲೆ ಹೊರಿಸಲಾದ ಆರೋಪಗಳ ಕುರಿತು ವಿಚಾರಣೆಯನ್ನು ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಸ್.ವಿ. ತಿಲ್‌ಗುಲ್, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ಸರ್ಕಾರವು ಈ ಮೂಲಕ ನೇಮಿಸುತ್ತದೆ. ಈ ಕಾರ್ಯಕ್ಕಾಗಿ ಅವರು ಸರ್ಕಾರಿ ಆದೇಶ ಕ್ರಮಾಂಕ ಸಿಆಸುಇ 3 ಸೇಇವಿ 96 ದಿನಾಂಕ: 24.04.98ರನ್ವಯ ರೂ. 5000-00ಗಳ ಸಂಚಿತ ಸಂಭಾವನೆಯನ್ನು ಹಾಗೂ ಸರ್ಕಾರಿ ಆದೇಶ ಕ್ರಮಾಂಕ ಸಿಆಸುಇ 45 ಸೇಇವಿ 2001 ದಿನಾಂಕ: 04.03.2002ರನ್ವಯ ರೂ. 1000/-ಗಳ ವಾಹನ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.

ಶಿಸ್ತುಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು, ಶ್ರೀ ಆರ್. ವೇಣುಗೋಪಾಲ್ ಕಾರ್ಯದರ್ಶಿ, ಸರ್ಕಾರಿ ವೈಮಾನಿಕ ತರಬೇತಿ ಶಾಲೆ ಅವರನ್ನು ಮಂಡನಾಧಿಕಾರಿಯಾಗಿ ಈ ಮೂಲಕ ನೇಮಿಸಲಾಗಿದೆ.

ಈ ವಿಚಾರಣೆಯನ್ನು ಈ ಆದೇಶದ ದಿನಾಂಕದಿಂದ **ಎರಡು ತಿಂಗಳೊಳಗಾಗಿ** ಪೂರ್ಣಗೊಳಿಸಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಲು ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ನರಸಿಂಹಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನಸೇವಾ ಇಲಾಖೆ.

ಪಿ.ಆರ್. 1292

## FOREST, ECOLOGY AND ENVIRONMENT SECRETARIAT

**Sub:** Diversion of 4.917 ha. of forest land for construction of 110 KV line from Shiralkoppa to Shikaripura.

**Read:**
1) Letter No. A5 (4) GFL.CR5/2001-2002 dt:04.10.2001 Principal Chief Conservator of Forests, Bangalore.
2) State Government letter No. FEE 281 FGL 2000 dt: 19.12.2001 and 24.06.2003.
3) Letter No. F(C)A/11.2/228/KAR/TL/522 dt:17.06.2002 and 04.07.2003 of Government of India, Ministry of Environment & Forests, Regional Office (Southern Zone), Bangalore.

**Preamble:**

The Principal Chief Conservator of Forests, Bangalore in his letter dated:04.10.2001 read at (1) above has submitted a proposal to State Government for release of an area of 4.917 ha. of forest land for construction of 110 KV line from 110/11 KV shiralkoppa Substation to the proposed 110/11 KV shikaripura substation at Kuntrahalli and Jakkanahalli forest in Shikaripura Taluk Shimoga District in favour of Karnataka Power Transmission Corporation Limited, Shimoga.

Accordingly, the proposal was recommended to Government of India for approval under section 2 of Forest (Conservation) Act 1980 vide State Government letter dated:19.12.2001 read at (2) above.

The Government of India, Ministry of Environment and Forests, Regional Office, (Southern Zone), Bangalore has agreed to the proposal in principle (stage-I) vide their letter dt: 17.06.2002 read at (3) above subject to condition that the cost of raising compensatory afforestation shall be recovered from the user agency.

The compliance report on the condition has been sent to Government of India vide State Government letter dated: 24.06.2003 read at (2) above.

The Government of India, Ministry of Environment & Forests, Regional Office (Southern Zone), Bangalore in their letter dt:04.07.2003 read at (3) above has conveyed its final approval (stage-II) in accordance with Section (2) of Forest (Conservation) Act, 1980 for the diversion of 4.917 ha. of forest land in Shikaripura Range and Shiralakoppa Range Sagar Division, Shimoga District for construction of

110 KV line from Shiralakoppa to Shikaripura in favour of Karnataka Power Transmission Corporation Limited, Shimoga with certain conditions.

The proposal has been examined in light of the final approval given by the Government of India and the following orders are issued.

**Government Order No. FEE 281 FGL 2000, Bangalore, Dated: 6th October, 2003**

After careful consideration of the proposal and under the circumstances stated in the preamble Government are pleased to accord approval under section 2 of Forest (Conservation) Act, 1980 for diversion of 4.917 ha. of forest land in Shikaripura Range and Shiralakoppa Range Sagar Division, Shimoga District for construction of 110 KV line from Shiralakoppa to Shikaripura in favour of Karnataka Power Transmission Corporation Limited, Shimoga subject to the following conditions.

1. Legal status of the forest land shall remain unchanged.
2. The compensatory afforestation shall be raised over 10.00 ha. of degraded forest land at the cost of user agency. The user agency shall pay the cost of raising compensatory afforestation over double the area in degraded forest area at the Rate prevailing at the time of approval (Now it is Rs. 54,200/- per ha).
3. The felling of trees in the forest area for the project shall be regulated in accordance with the instructions contained in Annexure V of the guidelines issued under the Act.
4. This shall be treated as a perpetual lease and the total forest area utilized for the project shall not exceed 4.917 ha. and it should be used only for the purpose for which it is granted. In case the land is not used for the stipulated purpose or when it is no longer needed for the stipulated purpose the area should automatically revert back to the Forest Department.
5. The cost of extraction of tree growth as calculated by the Department shall be paid by the user agency.
6. Any other conditions to be stipulated by the Government of India/State Government/Principal Chief Conservator of Forests, Karnataka in the interest of Conservation of Forests.

By Order and in the name of the Governor of Karnataka,

**S.R. VATSALA**

Under Secretary to Government,

Forest, Ecology and Environment Department.

PR-1293

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಯ ಜಂಟಿ ನಿರ್ದೇಶಕರು ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ ಹುದ್ದೆಯನ್ನು ಜಂಟಿ ನಿರ್ದೇಶಕರು ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ ಹುದ್ದೆ ಎಂದು ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 48 ಸಸಿವಿ 2002 ದಿನಾಂಕ: 07.03.2003.
2) ಅಧಿಸೂಚನೆ ಸಂಖ್ಯೆ: ಡಿಪಿಎಆರ್ 1 ಎಸ್ಎಎಸ್ 2003 (15) ದಿನಾಂಕ: 19.05.2003.
3) ಆಡಳಿತಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ, ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಡಿಡಿಪಿಇಆರ್ 143 ಎಂಇಎ 2003, ದಿನಾಂಕ: 14.08.2003 ಮತ್ತು 28.08.2003.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ: 07.03.2003ರಲ್ಲಿ ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಗೆ ಒಟ್ಟು 56 ಹುದ್ದೆಗಳನ್ನು ಸೃಜಿಸಿ ಆದೇಶ ಹೊರಡಿಸಿದ್ದು, ಇದರಲ್ಲಿ ಜಂಟಿ ನಿರ್ದೇಶಕರು ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ ಹುದ್ದೆಯೂ ಸೇರಿರುತ್ತದೆ. ಕ್ರಮ ಸಂಖ್ಯೆ(2)ರಲ್ಲಿ ಓದಲಾದ ದಿನಾಂಕ: 19.05.2003ರ ಅಧಿಸೂಚನೆಯಲ್ಲಿ ಶ್ರೀಮತಿ ಆರ್.ಎಸ್. ಸುಜಾತಾ. ಐ.ಎ.ಎಸ್. ಇವರನ್ನು ಸದರಿ ಇಲಾಖೆಯಲ್ಲಿ ಜಂಟಿ ನಿರ್ದೇಶಕರು (ಬಂಡವಾಳ ಹಿಂತೆಗೆಯುವಿಕೆ) ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ವರ್ಗಾಯಿಸಿ ನೇಮಿಸಲಾಗಿರುತ್ತದೆ ಹಾಗೂ ಇವರು ದಿನಾಂಕ: 15.07.2003ರಂದು ಈ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಆಡಳಿತಾಧಿಕಾರಿಗಳು ಹಾಗೂ ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆ ಇವರು ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ: 28.08.2003ರ ಅನಧಿಕೃತ ಟಿಪ್ಪಣಿಯಲ್ಲಿ ಶ್ರೀಮತಿ ಆರ್.ಎಸ್. ಸುಜಾತ ಇವರು ಹಿರಿಯ ಆಡಳಿತ ದರ್ಜೆಯ ಐ.ಎ.ಎಸ್. ಅಧಿಕಾರಿಯಾಗಿರುವುದರಿಂದ ಹಾಗೂ ಇಲಾಖೆಯ ಜಂಟಿ ನಿರ್ದೇಶಕರ ಹುದ್ದೆಯು ಉಪ ಕಾರ್ಯದರ್ಶಿಗಳಿಗೆ ಸಮಾನಾಂತರ ಹುದ್ದೆಯಾಗಿರುವುದರಿಂದ ಈ ಅಧಿಕಾರಿಗಳು ನೇಮಕಾತಿಯಾಗಿರುವ ಹುದ್ದೆಯನ್ನು ಅಪರ ನಿರ್ದೇಶಕರು ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ ಹುದ್ದೆ ಎಂದು ಪದನಾಮೀಕರಿಸುವಂತೆ ಕೋರಿರುತ್ತಾರೆ.

ಈ ಕಾರಣದಿಂದಾಗಿ, ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಯಲ್ಲಿ ಸೃಜಿಸಲಾಗಿರುವ ಜಂಟಿ ನಿರ್ದೇಶಕರು ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ ಹುದ್ದೆಯನ್ನು ಅಪರ ನಿರ್ದೇಶಕರು (ಬಂಡವಾಳ ಹಿಂತೆಗೆಯುವಿಕೆ) ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ ಹುದ್ದೆ ಎಂದು ಉನ್ನತೀಕರಿಸುವ ಬಗ್ಗೆ ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 48 ಸಸಿವಿ 2002, ಬೆಂಗಳೂರು, ದಿನಾಂಕ:12ನೇ ಸೆಪ್ಟೆಂಬರ್, 2003**

ಶ್ರೀಮತಿ ಆರ್.ಎಸ್. ಸುಜಾತಾ, ಐ.ಎ.ಎಸ್. ಇವರನ್ನು ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಯಲ್ಲಿ ಜಂಟಿ ನಿರ್ದೇಶಕರು (ಬಂಡವಾಳ ಹಿಂತೆಗೆಯುವಿಕೆ) ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ ಹುದ್ದೆಗೆ ವರ್ಗಾಯಿಸಿ ನೇಮಿಸಿರುವ ಹಿನ್ನೆಲೆಯಲ್ಲಿ ಪ್ರಸ್ತುತ ಈ ಇಲಾಖೆಗೆ ಮಂಜೂರು ಮಾಡಲಾಗಿರುವ ಜಂಟಿ ನಿರ್ದೇಶಕರು ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ ಹುದ್ದೆಯನ್ನು ಕರ್ನಾಟಕ ಸರ್ಕಾರದ ಸಚಿವಾಲಯ (ನೇಮಕಾತಿ) ನಿಯಮಗಳು 1992ರ ಅನ್ವಯ ಸದರಿ ಅಧಿಕಾರಿಗಳು ಈ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾದ ದಿನಾಂಕ: 15.07.2003ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆವಿಗೆ ಅಪರ ನಿರ್ದೇಶಕರು (ಬಂಡವಾಳ ಹಿಂತೆಗೆಯುವಿಕೆ) ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ ಹುದ್ದೆ ಎಂದು ಉನ್ನತೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 1294

**ಅಧಿಸೂಚನೆ-1**

**ಸಂಖ್ಯೆ:ಸಿಆಸುಇ 18 ಎಚ್‌ಎಚ್‌ಎಲ್ 2003, ಬೆಂಗಳೂರು, ದಿನಾಂಕ: 9ನೇ ಅಕ್ಟೋಬರ್, 2003**

ದಿನಾಂಕ: 19.10.2003ರ ಭಾನುವಾರದಂದು ನಡೆಯಲಿರುವ ಬೆಂಗಳೂರು ನಗರ ಜಿಲ್ಲೆಯ ಮಹದೇವಪುರ ನಗರಸಭೆಯ ಚುನಾವಣೆ ಪ್ರಯುಕ್ತ ಅದರ ವ್ಯಾಪ್ತಿಯಲ್ಲಿ ಬರುವ ಬ್ಯಾಂಕ್‌ಗಳು, ಕಾರ್ಖಾನೆಗಳು, ಕಂಪನಿಗಳು ಹಾಗೂ ಇತರೆ ಖಾಸಗಿ ಉದ್ದಿಮೆಗಳಿಗೆ (ಉರ್ದು ಹಾಗೂ ಇತರೆ ಶಾಲೆಗಳು ಸೇರಿದಂತೆ) ಸರ್ಕಾರವು ಸಾರ್ವತ್ರಿಕ ರಜೆಯನ್ನು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಜಿಯವುಲ್ಲಾ**
ಸರ್ಕಾರದ ಅಧೀನ ಕಾರ್ಯದರ್ಶಿ-1,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ).

**ಅಧಿಸೂಚನೆ-2**

**ಸಂಖ್ಯೆ:ಸಿಆಸುಇ 18 ಎಚ್‌ಎಚ್‌ಎಲ್ 2003, ಬೆಂಗಳೂರು, ದಿನಾಂಕ: 9ನೇ ಅಕ್ಟೋಬರ್, 2003**

ಭಾರತ ಸರ್ಕಾರ ಒಳಾಡಳಿತ ವ್ಯವಹಾರಗಳ ಇಲಾಖೆಯ ಕ್ರಮಾಂಕ 20-25-26 (ಪಿಯುಬಿ-1) ದಿನಾಂಕ: 15.06.1957ರ ಅಧಿಸೂಚನೆಯಲ್ಲಿ ಪ್ರಸ್ತಾಪಿಸಲಾಗಿರುವ ನೆಗೋಷಿಯಬಲ್ ಇನ್ಸ್‌ಟ್ರುಮೆಂಟ್ ಆ್ಯಕ್ಟ್ 1881 (1881ರ ಕೇಂದ್ರ ಮಸೂದೆ ಸಂಖ್ಯೆ: 24-1881)ರ 25ನೇ ಸೆಕ್ಷನ್‌ಲ್ಲಿರುವ ವಿವರಣೆಯಂತೆ ದಿನಾಂಕ: 19.10.2003ರ ಭಾನುವಾರದಂದು ನಡೆಯಲಿರುವ ಬೆಂಗಳೂರು ನಗರ ಜಿಲ್ಲೆಯ ಮಹಾದೇವಪುರ ನಗರಸಭೆಯ ಚುನಾವಣೆ ಪ್ರಯುಕ್ತ ಅದರ ವ್ಯಾಪ್ತಿಯಲ್ಲಿ ಬರುವ ಬ್ಯಾಂಕುಗಳು, ಕಾರ್ಖಾನೆಗಳು, ಕಂಪನಿಗಳು ಹಾಗೂ ಇತರೆ ಖಾಸಗಿ ಉದ್ದಿಮೆಗಳಿಗೆ ಸರ್ಕಾರವು ಸಾರ್ವತ್ರಿಕ ರಜೆಯನ್ನು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಜಿಯವುಲ್ಲಾ**
ಸರ್ಕಾರದ ಅಧೀನ ಕಾರ್ಯದರ್ಶಿ-1,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ).

ಪಿ.ಆರ್. 1295

## FOREST, ENVIRONMENT AND ECOLOGY SECRETARIAT

### CORRIGENDUM

**No.FEE 97 FAP 2002, Bangalore, Dated:19th September, 2003**

In Government Order No: FEE 97 FAP 2002, Dt:29.07.2003 for the words "2002-2003 to 2011-2012" appearing in 2nd and 3rd para of the order shall be read as "2003-04 to 2012-2013".

By Order and in the name of the Governor of Karnataka,
**H.V. RAMACHANDRA RAO**
Desk Officer (Planning),
Forest, Environment and Ecology Department.

PR-1296

### CORRIGENDUM

**No.FEE 190 FAP 2001, Bangalore, Dated:19th September, 2003**

In Government Order No: FEE 190 FAP 2001, Dt:29.07.2003 for the words "2002-2003 to 2011-2012" appearing in 2nd and 3rd para of the order shall be read as "2003-04 to 2012-2013".

By Order and in the name of the Governor of Karnataka,
**H.V. RAMACHANDRA RAO**
Desk Officer (Planning),
Forest, Environment and Ecology Department.

PR-1297

**CORRIGENDUM**

**No.FEE 255 FAP 2000, Bangalore, Dated:19th September, 2003**

In Government Order No: FEE 255 FAP 2000, Dt:29.07.2003 for the words "2002-2003 to 2011-2012" appearing in 2nd and 3rd para of the order shall be read as "2003-04 to 2012-2013".

By Order and in the name of the Governor of Karnataka,

**H.V. RAMACHANDRA RAO**

Desk Officer (Planning),

PR-1298 Forest, Environment and Ecology Department.

**ENERGY SECRETARIAT**

**Sub:** Conversion of Sandur Power Company Limited, in to a Public Limited Company-orders relating to.

**Read:** 1) Government Order No: DE 154 PPC 94 (3), Dated: 06.09.1994.
2) Government Order No: DE 36 NCE 96, Dated: 04.06.2001.
3) Letter No: SPCL/ED/ED336, Dated: 19.09.2003 of the Executive Director, M/s Sandur Power Company Limited.

**Preamble:**

In the Government Order Dated: 06.09.1994 cited (1) above M/s Sandur Power Company Limited, has been allotted 15 M.W. capacity Varahi Tailrace Mini Hydel Scheme. In the Government Order Dated: 04.06.2001 cited (2) above the capacity of the said scheme has been enhanced from 15 M.W. to 22.5 M.W. Now M/s Sandur Power Company Limited in their letter Dated: 19.09.2003 cited (3) have intimated that their company has been converted from private limited to public limited, with effect from 21.11.2002 and produced necessary documents in support of this and have requested to issue an amendment in respect of their allotment and agreement.

2. The Government have been examined this proposal. Hence the following Order.

**Government Order No.DE 249 NCE 2003, Bangalore, Dated:8th October, 2003**

3. In the circumstances explained above Government are pleased to permit to convert M/s Sandur Power Company Limited, from **'Private Limited' to public Limited** with the effect from 21.11.2002.

4. Necessary changes in this regard may be made in the allotment and agreement in the Government orders issued in this regard.

By Order and in the name of the Governor of Karnataka,

**K.L. JAYARAM**

Under Secretary to Government,

PR-1299 Energy Department.

**Sub:** Private placement of Bonds-Surrendering of Government Guarantee by KPTCL for Rs. 150 crores.

**Read:** 1) Government Notification No. DE/184/EEB/97 (P) Dated: 27.03.98;
2) Government Order No. DE/184/EEB/97(P) Dated: 27.03.98;
3) KPTCL Letter No. CFA/CC(B&R)/DC/5574 E2000/1956-57 Dated: 30.10.2000;
4) KPTCL Letter No. CFA/CC(B&R)/DC/60035 Dated: 12.07.2002;
5) KPTCL Letter No. CFA/CC(B&R)/DC/2002 Dated: 03.08.2002;
6) Government Order No. 37 PSR 2002, Bangalore, Dated: 07.11.2002.
7) KPTCL Letter No. FA (A&R)/DC/AO(L)/5574 EI/2003/7906 Dated: 01.08.2003.

**Preamble:**

As per the request of KPTCL, the Government of Karnataka had issued a guarantee for Rs. 150 crores vide GO No. DE 37 PSR 2002 Dated: 07.11.2002;

KPTCL in its letter Dated: 01.08.2003 read at (7) above requested for withdrawal of the said Government Order and the guarantee issued therein for Rs. 150 crores, due to the prevailing market financial conditions; and the revised policy of Reserve Bank of India in reducing the rate of interest; which is considerable. KPTCL also stated that the mobilization of funds through Commercial Banks/Financial Institutions in the form of term loans would work out cheaper compared to funds mobilization through private placement of Bonds.

Hence the following order:

**Government Order No. DE 37 PSR 2002, Bangalore, Dated: 1st October, 2003**

In the circumstances explained in the Preamble, Government of Karnataka hereby approves to withdraw the Government Guarantee given to KPTCL vide Govt. Order No. DE 37 PSR 2002 Dated:

07.11.2002 for mobilization of funds up to Rs. 150 crores for its capital works of Power Transmission Projects through private placement of bonds;

All the terms and conditions issued in the above mentioned Govt. Order are also hereby withdrawn.

This issues with the concurrence of the Finance Department vide U.O. Note No. FD 592/INV/2003 Dated: 11.09.2003.

By Order and in the name of the Governor of Karnataka,

**K.L. JAYARAM**

Under Secretary to Government,

Energy Department.

PR-1300

**ಸಮಾಜ ಕಲ್ಯಾಣ ಸಚಿವಾಲಯ**

**ವಿಷಯ:** ದರ್ವೇಶಿ ಜನಾಂಗಕ್ಕೆ ಧಾರ್ಮಿಕ ವಿಧಿಯಂತೆ ಧಾರ್ಮಿಕ ಭಿಕ್ಷೆ ಎತ್ತಲು ಪರವಾನಗಿ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಕಇ 40 ಎಸ್.ಬಿ.ಆರ್. 98 ಬೆಂಗಳೂರು, ದಿನಾಂಕ: 16.07.1999.

2) ಕಾರ್ಯದರ್ಶಿ, ದರ್ವೇಶ್ ವೆಲ್‌ಫೇರ್ ಅಸೋಸಿಯೇಷನ್ (ನೋಂ) ಬೆಂ-5 ಇವರ ಮನವಿ ಪತ್ರ ದಿನಾಂಕ: 24.05.2003.

3) ಕಾರ್ಯದರ್ಶಿ, ಕೇಂದ್ರ ಪರಿಹಾರ ಸಮಿತಿ ಬೆಂಗಳೂರು-ಇವರ ಪತ್ರ ಸಂಖ್ಯೆ: ಕೇಂಪಸ/ಎಂಐಎಸ್/94-95 ದಿನಾಂಕ: 07.07.2003.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ದರ್ವೇಶಿ ಜನಾಂಗಕ್ಕೆ ಸೇರಿದ ಧಾರ್ಮಿಕ ಭಿಕ್ಷುಗಳು, ಸಂಬಂಧಿಸಿದ ತಹಶೀಲ್ದಾರರವರಿಂದ ಪ್ರಮಾಣ ಪತ್ರ ಪಡೆದು ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿ ರಚಿಸಲಾಗಿರುವ ಜಿಲ್ಲಾ ಜಾತಿ ಮತ್ತು ಆದಾಯ ಪರಿಶೀಲನಾ ಸಮಿತಿಯಿಂದ ಸಿಂಧುತ್ವ ಪ್ರಮಾಣ ಪತ್ರ ಪಡೆದು ಅರ್ಜಿ ಸಲ್ಲಿಸಿದಲ್ಲಿ, ಅವರುಗಳಿಗೆ ಧಾರ್ಮಿಕ ವಿಧಿಯಂತೆ ಧಾರ್ಮಿಕ ಭಿಕ್ಷುಗಳಿಗೆ ಭಿಕ್ಷೆ ಎತ್ತಲು ಪರವಾನಗಿಯನ್ನು ನೀಡಲು ಅವಕಾಶವನ್ನು ಕಲ್ಪಿಸಲಾಗಿದೆ.

ಮೇಲೆ ಓದಲಾದ (2)ರಲ್ಲಿ ಕಾರ್ಯದರ್ಶಿ ದರ್ವೇಶ್ ವೆಲ್‌ಫೇರ್ ಅಸೋಸಿಯೇಷನ್ (ನೋಂ) ಬೆಂಗಳೂರು-5 ಇವರು ಸರ್ಕಾರಿ ಆದೇಶ ಸಂಖ್ಯೆ: ಸಕಇ 40 ಎಸ್.ಬಿ.ಆರ್. 98 ದಿನಾಂಕ: 15.07.99ರಲ್ಲಿ ಧಾರ್ಮಿಕ ಭಿಕ್ಷುಗಳಿಗೆ ಭಿಕ್ಷೆ ಎತ್ತಲು ಪರವಾನಗಿ ನೀಡಲು ಆದೇಶಿಸಿದ್ದರೂ ಸಹ ತಹಶೀಲ್ದಾರರವರಿಂದ ಪ್ರಮಾಣ ಪತ್ರ ಹಾಗೂ ಜಿಲ್ಲಾಧಿಕಾರಿಗಳಿಂದ ಸಿಂಧುತ್ವ ಪ್ರಮಾಣ ಪತ್ರ ಪಡೆದು ದರ್ವೇಶಿ ಬಾಂಧವರಿಗೆ ಕೇಂದ್ರ ಪರಿಹಾರ ಸಮಿತಿಗೆ ಅರ್ಜಿ ಸಲ್ಲಿಸುವುದು ಅತ್ಯಂತ ಕಷ್ಟದಾಯಕವಾದ ಸಮಸ್ಯೆಯಾಗಿದೆಯೆಂದು ಸರ್ಕಾರಿ ಕೆಲಸಕ್ಕೆ ಸೇರಿದಂತೆ ಭಿಕ್ಷುಕರು ಪ್ರಮಾಣ ಪತ್ರಗಳನ್ನು ತಾಲ್ಲೂಕು ಮತ್ತು ಜಿಲ್ಲಾ ಕಛೇರಿಗಳಿಂದ ಪಡೆಯುವುದು ದುಸ್ತರವಾಗಿದೆಯೆಂದು ಸಾಮಾನ್ಯವಾಗಿ ಸರ್ಕಾರಿ ಕಛೇರಿಗಳಲ್ಲಿ ಭಿಕ್ಷುಕರ ಚಲನವಲನಕ್ಕೆ ನಿಷೇಧ ಅಡ್ಡಿ ಇರುವುದರಿಂದ ಅವರ ಸಂಘಟನೆಗೆ ದರ್ವೇಶರನ್ನು ಗುರುತಿಸುವ ಮತ್ತು ಸದರಿ ವ್ಯಕ್ತಿಯ ಪ್ರಮಾಣ ಪತ್ರಕ್ಕೆ ಶಿಫಾರಸ್ಸು ಮಾಡುವ ಅಧಿಕಾರ ಕೊಡಬೇಕೆಂದು ಮನವಿ ಮಾಡಿರುತ್ತಾರೆ.

ಮೇಲೆ ಓದಲಾದ (3)ರಲ್ಲಿ ಕಾರ್ಯದರ್ಶಿ ಕೇಂದ್ರ ಪರಿಹಾರ ಸಮಿತಿ ಇವರು ಈ ಧಾರ್ಮಿಕ ಭಿಕ್ಷುಗಳಿಗೆ ಈಗಾಗಲೇ ಪರವಾನಗಿಯನ್ನು ನೀಡಿದ್ದು, ಸರ್ಕಾರಿ ಆದೇಶ ಸಂಖ್ಯೆ: ಸಕಇ 40 ಎಸ್.ಬಿ.ಆರ್. 98 ದಿನಾಂಕ: 16.07.99ರಲ್ಲಿ ಸೂಚಿಸಿರುವಂತೆ ಸಿಂಧುತ್ವದ ಪ್ರಮಾಣ ಪತ್ರ ಪಡೆದು ಅರ್ಜಿ ಸಲ್ಲಿಸಿದ್ದಲ್ಲಿ, ಫೋಟೋ ಸಹಿತ ಗುರುತಿನ ಚೀಟಿ ಹಾಗೂ ಪರವಾನಗಿಯನ್ನು ನೀಡುವಂತೆ ಕೋರಿರುತ್ತಾರೆ. ಕಾರಣ ಈ ಆದೇಶ.

**ಸರ್ಕಾರ ಆದೇಶ ಸಂಖ್ಯೆ:ಸಕಇ 33 ಎಸ್.ಬಿ.ಆರ್. 2003, ಬೆಂಗಳೂರು, ದಿನಾಂಕ: 9ನೇ ಅಕ್ಟೋಬರ್, 2003**

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಕರ್ನಾಟಕ ಭಿಕ್ಷಾಟನಾ ನಿರ್ಮೂಲನಾ ಕಾಯಿದೆ 1975ರ ಸೆಕ್ಷನ್ 2(2)ರ ಪ್ರಕಾರ ದರ್ವೇಶ್ ಜನಾಂಗಕ್ಕೆ ಧಾರ್ಮಿಕ ವಿಧಿಯಂತೆ ಭಿಕ್ಷೆ ಎತ್ತಲು ಅನುಮೋದನೆಯನ್ನು ಈಗಾಗಲೇ ನೀಡಲಾಗಿದೆ ಈ ಧಾರ್ಮಿಕ ಭಿಕ್ಷುಗಳನ್ನು ಗುರುತಿಸುವ ಬಗ್ಗೆ ಈ ಕೆಳಕಂಡಂತೆ ಸೂಚನೆಯನ್ನು ಪಾಲಿಸಬೇಕು:

1) ಕರ್ನಾಟಕ ಭಿಕ್ಷಾಟನೆ ನಿರ್ಮೂಲನಾ ಕಾಯಿದೆ ಸೆಕ್ಷನ್ 2(2)ರ ಪ್ರಕಾರ ಧಾರ್ಮಿಕ ಬಿಕ್ಷುಗಳಿಗೆ ಬಿಕ್ಷಾಟನೆ ಮಾಡಲು ಯಾವುದೇ ಸಮಸ್ಯೆಗಳು ಬಾರದಂತೆ ಕೇಂದ್ರ ಪರಿಹಾರ ಸಮಿತಿಯು ನೋಡಿಕೊಳ್ಳುವುದು;

2) ಇಂತಹ ಧಾರ್ಮಿಕ ಭಿಕ್ಷುಗಳನ್ನು ಗುರುತಿಸಲು ಅವಶ್ಯಕವಾಗುವಂತೆ ಅವರುಗಳಿಗೆ ವಿಶೇಷ ಗುರುತಿನ ಚೀಟಿ (Identity card) ಗಳನ್ನು ನೀಡುವುದು. ಈ ಗುರುತಿನ ಚೀಟಿಗಳನ್ನು ಹೊಂದಿರುವವರನ್ನು ಕೇಂದ್ರ ಪರಿಹಾರ ಸಮಿತಿಯ ಸಿಬ್ಬಂದಿ ವರ್ಗದವರು/ಪೊಲೀಸರು ಬಂಧಿಸಬಾರದು;

3) ದಿನಾಂಕ: 16.07.99ರ ಸರ್ಕಾರಿ ಆದೇಶದಲ್ಲಿರುವಂತೆ ಧಾರ್ಮಿಕ ಬಿಕ್ಷುಗಳು ತಹಶೀಲ್ದಾರರವರಿಂದ ಪ್ರಮಾಣ ಪತ್ರವನ್ನು ಪಡೆದು, ಜಿಲ್ಲಾ ಸಮಿತಿಯಿಂದ ಸಿಂಧುತ್ವ ಪತ್ರವನ್ನು ಪಡೆಯುವ ಕ್ರಮವನ್ನು ಕೈ ಬಿಡಲಾಗಿದೆ.

4) ಧಾರ್ಮಿಕ ಭಿಕ್ಷುಗಳಿಗೆ ನೀಡಲಾಗುವ ಗುರುತಿನ ಚೀಟಿಗಳನ್ನು ಅಧಿಕೃತವಾಗಿ ಕೇಂದ್ರ ಪರಿಹಾರ ಸಮಿತಿಯಿಂದ ಅನುಮೋದನೆಯನ್ನು ಪಡೆದ ಸಂಘದ ಪದಾಧಿಕಾರಿಗಳು ದೃಢೀಕರಿಸತಕ್ಕದ್ದು. ದರ್ವೇಶ್ ಜನಾಂಗದ ಧಾರ್ಮಿಕ ಭಿಕ್ಷುಗಳಿಗೆ ಸಂಬಂಧಿಸಿದಂತೆ ಈ ಪ್ರಮಾಣ ಪತ್ರವನ್ನು ನೀಡಲು ಕಾರ್ಯದರ್ಶಿಗಳು, ದರ್ವೇಶ್ ವೆಲ್‌ಫೇರ್ ಅಸೋಸಿಯೇಷನ್ (ರಿ) ನಂ.18, ಈದ್ಗಾ ಕಾಂಪ್ಲೆಕ್ಸ್, ಟಿಎಸ್‌ಎ ಟ್ಯಾನರಿ ರೋಡ್, ಬೆಂಗಳೂರು-5 ಇವರಿಗೆ ಅನುಮೋದನೆಯನ್ನು ನೀಡಲಾಗಿದೆ. ಆದರೆ ಮೇಲ್ಕಂಡಂತೆ ನೀಡಲಾಗುವ ಗುರುತಿನ ಚೀಟಿಯು ಭಿಕ್ಷಾಟನೆ ನಿರ್ಮೂಲನಾ ಕಾಯಿದೆ ಪ್ರಕಾರ ಧಾರ್ಮಿಕ ಭಿಕ್ಷುಗಳನ್ನು ಗುರುತಿಸುವಿಕೆಗೆ ನೀಡಲಾಗಿದೆ ಹೊರತು ಬೇರೆ ಯಾವುದೇ ಕಾರಣಕ್ಕೆ ಉಪಯೋಗಿಸುವಂತಿಲ್ಲ ಹಾಗೂ ಯಾವುದೇ ಜಾತಿ ಪ್ರಮಾಣ ಪತ್ರವನ್ನು ಪಡೆಯುವ ಸಲುವಾಗಿ ಆಧಾರವಾಗಿರುವುದಿಲ್ಲವೆಂಬ ಸ್ಪಷ್ಟೀಕರಣವನ್ನು ಅದೇ ಗುರುತಿನ ಚೀಟಿಯಲ್ಲಿ ನಮೂದಿಸತಕ್ಕದ್ದು. ಗುರುತಿನ ಚೀಟಿಯನ್ನು ಕೇಂದ್ರ ಪರಿಹಾರ ಸಮಿತಿಯ ಅಧಿಕಾರಿಗಳು ದೃಢೀಕರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮರುಳಸಿದ್ದಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 1301